## ನೇಮಿಚಂದ್ರ

ವಿರಚಿತ

# ಲೀಲಾವತಿ ಪ್ರಬಂಧ

೯ ಮತ್ತು ೧೦ ನೆಯ ಆಶ್ವಾಸಗಳು.

ಸಂಪಾದಕರು:— ಕೆ. ಜಿ. ಕುಂದಣಗಾರರು.

ಕರ್ನಾಟಕ ಸಾಹಿತ್ಯ ಮಂದಿರ,
ಧಾರವಾಡ.

# ಮುನ್ನುಡಿ

೧೯೫೬ನೆಯ ಮತ್ತು ೧೯೫೭ನೆಯ ವರ್ಷಗಳ ಬಿ. ಎ. ಪರೀಕ್ಷೆಗೆಂದು ಓದುತ್ತಿರುವ ವಿದ್ಯಾರ್ಥಿಗಳಿಗೆ ಲೀಲಾವತಿ ಪ್ರಬಂಧದ ೯ನೆಯ ಮತ್ತು ೧೦ನೆಯ ಆಶ್ವಾಸಗಳು ನೇಮಕವಾಗಿವೆ. ವಿದ್ಯಾರ್ಥಿಗಳ ಸೌಲಭ್ಯಕ್ಕೆಂದು ಈ ಎರಡು ಆಶ್ವಾಸಗಳನ್ನು ಸ್ವತಂತ್ರವಾಗಿ ಅಚ್ಚು ಮಾಡಿಸುವುದು ನಿಶ್ಚಿತವಾದ ಮೇಲೆ ಪ್ರೊ. ಎ. ಎನ್. ಉಪಾಧ್ಯೇಯವರ ಮುಖಾಂತರವಾಗಿ ಪಂಡಿತ ನ್ಯಾಯತೀರ್ಥ ಕೆ. ಭುಜಬಲಿ ಶಾಸ್ತ್ರಿಗಳವರನ್ನು ಆರಾ ಜೈನ ಪುಸ್ತಕಾಲಯದೊಳಗಿನ ಎರಡು ಓಲೆಗರಿಯ ಪುಸ್ತಕಗಳನ್ನು ಕಳುಹಬೇಕೆಂದು ಕೇಳಿಕೊಳ್ಳಲಾಯಿತು. ಅವರು ದಯವಿಟ್ಟು ೧೫೦/೧೧೫೧ ಮತ್ತು ೧೯/೧೧೫೩ ನಂಬರುಗಳುಳ್ಳ ಎರಡು ಓಲೆಗರಿಯ ಪುಸ್ತಕಗಳನ್ನು ಕಳುಹಿದರು. ಇವುಗಳಲ್ಲಿ ಮೊದಲನೆಯದು ಕೆಲಮಟ್ಟಿಗೆ ಅಶುದ್ಧವಾಗಿದೆ. ಎರಡನೆಯದು ಶುದ್ಧ ಪ್ರತಿಯು. ಇವೆರಡರ ಆಧಾರದಿಂದ ಅಚ್ಚಿನ ಪ್ರತಿಯನ್ನು ಸಿದ್ಧ ಮಾಡಿಕೊಂಡೆನು. ಧಾರವಾಡದ ಕರ್ನಾಟಕ ಸಾಹಿತ್ಯ ಮಂದಿರದವರು ವಿದ್ಯಾರ್ಥಿಗಳ ಸೌಕರ್ಯಕ್ಕೆಂದು ಅಚ್ಚು ಮಾಡಿಸಿದರು. ವಿದ್ಯಾರ್ಥಿಗಳ ಪರವಾಗಿ ಪಂಡಿತ ಕೆ. ಭಜಬಲಿಶಾಸ್ತ್ರಿಗಳವರಿಗೂ ಕರ್ನಾಟಕ ಸಾಹಿತ್ಯ ಮಂದಿರದವರಿಗೂ ನನ್ನ ನಮ್ರ ವಂದನೆಗಳು. ಪ್ರೂಫುತಿದ್ದುವ ಕೆಲಸದಲ್ಲಿ ವಿಶೇಷ ಶ್ರಮವಹಿಸಿ ನೆರವಾದ ಪಂಡಿತ ಮ. ಪ್ರ. ಪೂಜಾರ ಅವರನ್ನೂ ಶ್ರೀಮಾನ್ ಕೃಷ್ಣ ಶರ್ಮ ಬೆಟಗೇರಿಯವರನ್ನೂ ಅಭಿನಂದಿಸದಿರಲಾರೆನು.

**ಕೆ. ಜಿ. ಕುಂದಣಗಾರ**

# ಲೀಲಾವತಿ ಪ್ರಬಂಧ

## ॥ ನವಮಾಶ್ವಾಸಂ ॥

ಶ್ರೀಪರನಾಜಿನನಿಳಯುದೊ ।
ಳಾವೊತ್ತುಂ ತಳರದಾ ಮುನೀಶ್ವರ ಪದರಾ ॥
ಜೀವಮುಸೋಲಗಿಸುತ್ತುಂ ।
ಭಾವಕನಿಕರಂ ಕೃತಾರ್ಥನಿರೆ ಕೇಲದಿವಸಂ ॥೧॥

ನೀಳಲ ಕಂಪನೊಟ್ಟಿ ನಳಿಸಂಗಳನಳ್ಕಿಸಿ ಬೆಳ್ಮುಗಿಲ್ಗಳಂ ।
ತೂಳಮುನೆತ್ತುವಂತೆಱೆದು ಸೋಗೆಯ ಪೀಲಿಯು ಬೆಱನೆತ್ತಿ ಹಂ ॥
ಸಾಳಿಯ ತುಪ್ಪುಱಿಂ ತುಱಿದು ಪಶ್ಚಿಮದಿಂ ಬಡವಾಗಿ ಬರ್ಪ ವೆ ।
ಲ್ಗಾಳಿಯನೊತ್ತಿ ತೀಡಿದುದು ಮೂಡಣಗಾಳಿ ಹಿಮಪ್ರದೇಶದೊಳ್ ॥೨॥

ಇಂದಾರಂ ಕುಳಿರ್ದಪ್ಪುದಿಂದು ಪಗಲುಂ ಮೆಯ್ಕೋಡಿತಿಂದೊಳ್ಪಿಸಿಲ್ ।
ನಾಂದಂತಿರ್ದಪುದಿಂದು ಪಾಲಬಸಿಱಿಂ ಬಂದಂತಿರಿಂದಿಂತು ನೀರ್ ॥
ಪೊಂದಿತ್ತಿಂದಱೆ ಜಾವಮಾಯುತ್ತ ಮುಗಿದತ್ತಿಲ್ಲುತ್ಪಳಂ ಪಂಕಜಂ ।
ಕುಂದಿತ್ತಿಂದೆಲೆ ಪೊಕ್ಕುದಕ್ಕುಮಿಳೆಯೊಳ್ ಹೇಮಂತಮೇಮಂತಣಂ ॥೩॥

ಕರಿಣೀಪೇಚಕಮುಂ ತುಡುಂಕದೆ ವನೇಭಂ ಕಾಮುಕರ್ ಕಾಮಿನೀ ।
ಪರಿರಂಭಸ್ಪೃಹರಾಸೆಗೆಯ್ಯರೆ ರತವ್ಯಾಪಾರಮುಂ ಪುಲ್ಲೆಯುಂ ॥
ಹರಿಣಂಗಳ್ ನಡೆನೋಡಲೊಲ್ಲವೆ ಹಿಮವ್ಯಾಪಾರದಿಂ ಬಿಲ್ಗೆ ಕೆ ।
ಯ್ದುರಲೇನಾಱಿಸೊ ಪೂವಿನಂಬು ತನಗಿಲ್ಲಾಗಿರ್ದನೋ ಮನ್ಮಥಂ ॥೪॥

॥ ರಥೋದ್ಧತೆ ॥

ಒಂದೆ ತುಂದಮುಲರ್ದತ್ತುಗಾಳಿಗೊ ।
ಲ್ದೊಂದಿತೊಂದೆ ಗುಣಮುಧ್ವಗವ್ರಜ ॥
ಕ್ಕೊಂದೆ ಮುಗ್ಗುಲಮುರ್ದತ್ತು ಪೊರ್ತಡ ।
ದೊಂದೆ ಬೆಳ್ಪಿ ಬೆಳಗಿತ್ತು ಮಾಗಿಯೊಳ್ ॥೫॥

॥ ಮಾಲಿನಿ ॥

ಮುಂಗಿಯೆ ಕಱದ ಕಂಜಂ ವಾಜಿಗಳ್ ಸುರ್ಕೆ ಸೂತಂ ।
ಸುಗಿದು ಪೆಱಪನಾದಂತ್ಯೈಕಿಲಿಂ ಪೆರ್ನರಂಗಳ್ ।
ತೆಗೆಯೆ ರಥದ ಕೀಲಂ ಕಿತ್ತು ಪೊತ್ತಿಕ್ಕೆ ಕಣ್ಣೊಳ್ ।
ಪುಗೆ ಪೊಗೆ ರವಿ ಸಾರ್ತಂಡದೂಡುವಂ ಪೋಪ ಕಿಚ್ಚಂ ॥೬॥

ತುಹಿಸಂ ತಾಗುಗುಪುಂಭೋ ।
ರುಹಪುಂ ಕರಗತಮನೆಂದು ಕೊಂಡಾಡುವವೋ ॥
ಲಹಿಮಕರಂ ಪೊಡೆಯಿಸುವಂ ।
ದಹನಾಶೆಗೆ ರಥಮಸರುಣನಾ ದಿಸಮುಖದೊಳ್ ॥೭॥

ಮಾಸಱಿಮನೆ ಪಾರದದಿಂ ।
ಪೂಸಿದವೋಲ್ ಪೊಸ್ನಮುಕುರಪಂ ಹಿಮಲಿಪ್ತಂ ॥
ನೇಸಱ ಬಿಂಬಂ ತಿಂಗಳ ।
ಕೂಸಿನವೋಲ್ ಕೋಡುತಿರ್ದುದಂದಿಸ ದಿನದೊಳ್ ॥೮॥

ಚಳಿಗಳ್ಕಿ ಕಱಯ ಪೊಸಕಂ ।
ಬಳಿಯಂ ಮುಸುಕಿದವೊಲಗ್ನಿಯುಪಗತತಾಣಾರ್ ॥
ನಳರಾಶಿಯೆಸೆದುವಂತ ।
ಜ್ವಳದುಲ್ಮುಕಮೊಟ್ಟೆ ಪೋಗೆ ಪಥಿಕರ್ ಪಥದೊಳ್ ॥೯॥

ಬಿಸಿಲೆಂದು ಸಾರ್ದು ಕೊಂಬಿನ ।
ಕಿಸಲಯಮಂ ಕೊಂಚೆ ಸಲುಗೆ ಸುರಿವೆಲೆಯ ಹಿಮ ॥
ಪ್ರಸರದೊಳೆ ನಾಂದುದೇಂ ಲಂ ।
ಘಸಲಾರ್ತುದೆ ಕೋಡನೋಡಿ ತುಹಿನಾಗಮದೊಳ್ ॥೧೦॥

ಕೊಂಕೊಳಲೆಗಳಡಿಯಿಟ್ಟು ಕು ।
ಱುಂಕಿದ ನಱುಗೆರೆಯ ಮೀನುವಂ ಮಿಡಿಚೆಯುಮಂ ॥
ಸಂಕಮೆನೆಕಾಯ್ತು ಕೊಳ್ಬೆ ।
ಕ್ಷಂಕಿಗಳಂ ಪೊತ್ತುವದಱ ತಟರುಹತತಿಗಳ್ (?) ॥೧೧॥

ಕೊಂಕೊಳಲೆ ಕೊಳಲೆ ನಡೆಯಲೊ ।
ಡಂ ಕೆಸಱಿನಿಸುಱಿಯೆ ಸುಱಿಯೆ ನೀರ್ಮುೞುಂಗಿದ ಮೀ ॥
ನಂ ಕಳಲೆ ಕಳಲೆ ಚಂಚುಪು ।
ಟಂ ಕದುರ್ಕಿದ ಜಗುಳೆ ಜಗುಳೆ ಸಾರ್ದತ್ತು ಬಕಂ ॥೧೨॥

ತಡಿವಿಡಿದು ನಡೆದು ಮೆಲ್ಲಗೆ ।
ತಡಾಗಜಳದೊಳಗೆ ಪೊಳೆವ ನಿಜಚಂಚುಗಳಂ ॥
ಮಿಡುಕುವ ಮೀನ್ಗೆತ್ತೊಡರಿಸಿ ।
ತುಡುಕಿದುವಡಿಗಡಿಗೆ ಬಾಳಖಗಸಂತತಿಗಳ್ ॥೧೩॥

ಕೊಳಗಳೊಳಗಿಂದೆ ಪೊಱಮ ।
ಟ್ಟೆಳವಿಸಿಲಂ ಕಾಯುತಿರ್ದುವಾಮೆಗಳೆಳೆಮೀನ್ ॥
ಪೊಳೆದೊಡಮೊಳಪುಗದಿರ್ದುವು ।
ಜಳಾಶಯಪ್ರಾಂತದೊಳ್ ಬಕೋಟಕುಟುಂಬಂ ॥೧೪॥

ಖಂಡಿಸೆ ಬಿಸಕಳಿಕೆಗಳಂ ।
ತುಂಡಂ ಕುತ್ತಿಱಿಯೆ ಬಿದಿರ್ದು ಬಳ್ಕಿಸಿ ತಲೆಯಂ ॥
ಕೊಂಡೋಡಿ ತೊಡೆದುಕೊಂಡುವು ।
ಮಂಡಳಿಸಿದ ಪಕ್ಕದಲ್ಲಿ ಕಳಹಂಸಂಗಳ್ ॥೧೫॥

ಮಱಿದುಂಬಿಗಳಂಬುರುಹದ ।
ನಱುಗಂಪಿಂ ಬಳೆದುಮವಱ ಸಿರಿ ತೊಲಗಲೊಡಂ ॥
ಮಱೆದೆಱಗಿ ನೋಡದುತ್ಪಲ ।
ಕೆಱಗಿದುವು ವಿಜಾತಿಯಲ್ಲಿ ಗುಣಮಱಿಸುವುದೇ ॥೧೬॥

ನೆನೆಯಲೊಡಮೆತ್ತಿ ಮನದೊಳ್ ।
ತನಿಗಿರ್ಚಂ ಹಿಮಮನೋಡಿಸುವ ನವಯುವತೀ ॥
ಸ್ತನಭರಮಂ ತೆಗೆದಪ್ಪಿದ ।
ಮನುಜರದೇನಱಿಪುದರಿಂದೆ ಮಾಗೆಯ ಮೂಗಂ ॥೧೭॥

ನಡುಗುತ್ತುಂ ನೆನೆದಂತೆ ವಲ್ಲಭೆಯುರಂ ತಱಿಕೈಸುವರ್ ತಾಮೆ ತ ।
ಮ್ಮೊಡಲಂ ಮೆಯ್ಮುಱುರ್ಚೆ ತಮ್ಮಧರಮುಂ ತಾವಿಾಱು ದಂತಾಗ್ರದಿಂ ॥
ಪಿಡಿವರ್ ಪಾಂಥರೆಸಲ್ಕೆ ತಱಿು ತರುಣೀ ಸೋಷ್ಣಸ್ತನದ್ವಂದ್ವಮುಂ ।
ಬಿಡಲೇನಾರ್ಪರೆ ಪುಣ್ಯವಂತರಱಿಪರ್ ತಾಮುಂತೆ ಹೇಮಂತದೊಳ್ ॥೧೮॥

ನಂದುವ ಪುಲ್ಲ ಕಿಚ್ಚಿನೊಳೆ ಕಪ್ಪಡಮುಂ ಪರಿದಿಕ್ಕಿ ಪಾಂಥನುಃ ।
ಪೆಂದಿರದೂದೆ ಪೊಣ್ಮಿಪೊಗೆ ಕಣ್ಗೊಳಗಂ ಪುಗೆ ಬಾಷ್ಪಬಿಂದು ಬೀ ॥
ೞ್ತಿಂದು ತಡಗ್ನಿಯುಂ ನದಿಪಿದತ್ತಕಟಾತನ ಬೆನ್ನ ಕಪ್ಪಡಂ ।
ಬೆಂದುದು ಬಂದುದಾಗಳೆ ಹಿಮಾನಿಳನಿಂತುಟು ಪಾಂಥರುಬ್ಬಸಂ ॥೧೯॥

ಪೊಃಪುಲ್ಗೊಳ್ ಕಿಚ್ಚನಿಟ್ಟೂದಿನೊಡುರಿದುರಿ ಕೂರ್ಚಾಗ್ರಮುಂ ಪತ್ತೆ ಕೆಯ್ಯಂ ।
ಪೊಸೆದುಂ ವಸ್ತ್ರಾಗ್ರದಿಂ ಮೋದಿಯುಮುಗುಳ್ಪಱಿಯುಂ ನಾಂದಿಯುಂ ಮೊಕ್ಕಳಂ ನಂ ॥
ದಿಸಲೆಂತುಂ ಪಾಂಥನಂದಾಱಿದೆ ನಡುಮುಡುಮಂ ಪೋಗಿ ಬಿರ್ದ್ದೈಕಿಲಿಂ ಕ ।
ಪಿಸುತಿರ್ದಂ ಪುಲ್ಲ ಕಿಚ್ಚುಂ ಪೊಲೆಯುಸ ಕೆಳೆಯುಂ ಮಾಡದಾವಂಗೆ ಕೇಡಂ ॥೨೦॥

ತಳಿರೊಳ್ ಮುಚ್ಚಿಟ್ಟು ಕೂಸಂ ಶಬರ ತೆಗೆದು ನಿಶ್ಚೇಷ್ಟಮಾಗಿರ್ದೊಡಂ ಕ ।
ಣ್ಗಳ ನೀರಂ ತೀವಿ ಬೇಗಂ ತೊಡೆದು ಹಿಮಕಣಾನೀಕಮುಂ ತೇಂಕುದಾಣಂ ।
ಗಳಸಂಟಂಟೆಲ್ಲಿಯುಂ ಕಾಣದೆ ಹರಣಮುನತ್ಯುಷ್ಣದಿಂ ಸುಯ್ಯೆ ಸುಯ್ಯಂ ।
ದೆಳಗೂಸೆೞ್ಚತ್ತು ಕಾವ್ಕಾವೆನೆ ತೊಱಿದ ಕುಚಾಗ್ರಂಗಳಂ– ನೀಡುತಿರ್ದಳ್ ॥೨೧॥

ಜಡನೆಂದಜಸಂ ನುಡಿವರ ।
ನುಡಿಗಕ್ಕೆ ಶುಭೋದಯಂ ಸ್ವಜನಕಾಂಬುಜಮುಂ ॥
ಕಿಡಿಸುವ ಶಿಶಿರಾಗಮಮುಂ ।
ಪಡೆದಪನಿನ್ನವು ವಿವೇಕವಿಕಳತೆಯೊಳವೆ ॥೨೨॥

ಕಮಳಿನಿಯು ಸಿರಿಯುನಿನನ।
ಸ್ತಮಿಸಲೊಡಂ ಕವರೆ ಶಿಶಿರರಾಜಂ ಪಿರಿದುಂ॥
ತಮಗುತ್ಸವಮಾದಂತಿರೆ।
ಕುಮುದಂಗಳ್ ಪಟಿಚಸಲದರ್ುವಬ್ಬದ ಕೆಲದೊಳ್ ॥೨೩॥

ಗಿರಿಗಳ್ ಜಂಗಮವಪುಗಳ್।
ಸಿರದೊಳ್ ಸಸಿದರಲೆಯಂತೆ ಮುಸುಱಿದ ಮಂಜಿಂ॥
ನರೆಯಂ ಪೊತ್ತವೊಲಿದರ್ುವು।
ನಿರವಸ್ಥಿತದಶನಘನಗುಹಾಮುಖತತಿಗಳ್ ॥೨೪॥

ಕೃತಶೀಘ್ರಸ್ನಾನಮುನ್ನರ್ತನ ವಿಕೃತಕರಾಕೃಷ್ಟವಸ್ತ್ರಾಂತರಂ ವಿ।
ಸ್ತೃತದರ್ಭಂ ಗದ್ಗದೋಚ್ಚಾರಿತಜಪಮುಪಸಂಜಾತರೋಮಾಂಚ-
ಮಾಕಂ॥
ಚಿತಗಾತ್ರಂ ವಹ್ನಿಸಂದೀಪನಪಟು ಪಟುರಕ್ತೇಕ್ಷಣಂ ನೀರತೀರ।
ಸ್ಥಿತಮಿರ್ದತ್ತಂದು ವೈಭಾತಿಕವಿಧಿವಿಹಿತಾಮೋಘಮಾಘಂ
ದ್ವಿಜೌಘಂ॥೨೫॥

ಸರಸೀ ತೀರಂಗಳೊಳ್ ಬೆಳ್ಗಿಱಿಗಳ ತಡಿಯೊಳ್ ಸಿಂಧುಕೂಲಂ-
ಗಳೊಳ್ ಶೀ।
ಕರಮುಂ ನೀಹಾರಮುಂ ಮುತ್ತಿನ ಮಿಱುಗಸಣಂ ಮೆತ್ತಿದಂತೊಪ್ಪೆ
ಮೆಯ್ಯೊಳ್॥
ಪರಮಾತ್ಮಧ್ಯಾನವಹ್ನಿಜ್ವಳಿತರಚಳಿತರ್ ಜೈನಯೋಗೀಶ್ವರರ್ ಭಾ।
ಸ್ಕರಪಾತೋತ್ಥಾನವೇಳಾವಿಹಿತನಿಯಮದಿಂದಂದು ಕೆಯ್ಯಿಕ್ಕಿ
ನಿಂದರ್॥೨೬॥

ಸರಸೀವಾರ್ಬಿಂದುವಂ ಪೊತ್ತಡಕಿಗಡಣದಿಂ ಗಾಳಿಗಳ್ಪಾಯ್ದು
ಪೊಯ್ಯ।
ತ್ತಿರ ನೀಹಾರಾಂಬುಪಲ್ಲಲ್ಲುಗುತಿರೆ ಪುಳಕಸ್ಪಂದಶೂನ್ಯಂಗಳಪ್ರ।

ಸ್ಫುರಿತಂಗಳ್ ಬೆಳ್ಳವಾಸಂಗಳೊಳಚಳಶಿಳಾಸ್ತಂಭಸಂಘಾತಮೆಂಬಂ ।
ತಿರೆ ಕೆಯ್ಯಿಕ್ಕಿರ್ದ ಯೋಗೀಶ್ವರವರವಪುಗಳ್ ಕಾವುವಕ್ಕೆಮ್ಮ-
ನೆಂದುಂ ॥೨೭॥

ಅಂತು ಬಂದ ಹೇಮಂತ ಶಿಶಿರಂಗಳಿಂ ಯಶೋಮರುನ್ನದಿಯ ಹಿಮವಂತನೆಂತಾನುಮಂತಜ್ವರ್ಳದನಂಗದಹನನತಿಕ್ರಮಿಸಿ ಮಿಸುಗುಮಿಂದ್ರಕೂಟ ಜಿನಾಲಯದಿಂ ತಳರ್ದು ದೇವಗಿರಿಗೆ ಬಂದು ಜಿನಬಿಂಬಕದಂಬಕಮಂ ವಂದಿಸಿ,

॥ ಆರ್ಯೆ ಸಂಸ್ಕೃತ ॥

ವಿತರತು ಧೃತಿಮನವರತಂ ವಿತತಶುಭಸ್ಸುರಮಹೀಧರೋ
ಮಹ್ಯಂ ॥

ಧೃತಜಿನಬಿಂಬಕದಂಬಂ ಸತಾಮಿಮಾತ್ಯುಜ್ಜ್ವಲಶ್ಲೋಕಃ ॥

ಎಂದು ದೇವಗಿರಿಯಂ ಸ್ತುತಿಸಿ ಬಲದೊಳಿಕ್ಕಿ ಪೋಪಂಗಾಗಿರಿಯ ಲತೆಯ ಕುಡಿಗಳಡ್ಡಂಬಾಯ್ದೀಗಿರಿಯ ತರುಶಾಖೆಗಳನಡುರ್ವವೀ ಗಿರಿಯ ನಿರ್ಜರಜಲಶೀಕರನಿಕರಂಗಳಾಗಿರಿಯ ಸೂರ್ಯಮಣಿಶಿಖಿಕಣಂಗಳಂ ನದಿಪುವಾಗಿರಿಯ ಮಣಿಮರೀಚಿಗಳಾಗಿರಿಗುಹೆಯ ತಿಮಿರಂಗಳನಳಿಪುವುದೀ ಗಿರಿಯ ಮುಗಿಲ್ಗಾಗಿರಿಯ ನವಿಲ್ಗಳಾಡುವುವೆನಿಸಿ,

ತೊಳಗಿದುದಂಬರಕ್ಕೊಗೆದು ಪಚ್ಚೆಯ ಕಾಂತಿ ಪಸುರ್ತ ಪಲ್ಲವಾ ।
ವಳಿಯೆನೆ ವಜ್ರಕಾಂತಿ ಸನೆಯುರ್ಬೆನೆ ಮೌಕ್ತಿಕಕಾಂತಿ ಪುಷ್ಪಸಂ ॥
ಕುಳಮೆನೆ ನೀಳಕಾಂತಿ ಮರಿದುಂಬಿಯ ಪಿಂಡೆನೆ ಶೋಣಕಾಂತಿ ಕೆಂ ।
ದಳಿರೆನೆ ನಾಕದಿಂದಿಳಿವ ನಂದನದಂತೆ ಮಯೂಖನಿರ್ಝರಂ ॥೨೮॥

ಆ ಮಯೂಖನಿರ್ಝರಮೆಂಬ ರತ್ನಶೈಲಮಂ ಶಿಲಾಮಣಿಶೈಲನಾ ದೇವಶೈಲಮಹೀಪಾಲನ ಮಾಣಿಕದ ಮಲಗೆಂದೇ ಬಗೆಯುತ್ತುಮೆಯ್ದುವರೆ;

ಜ್ವಳದರ್ಕಗ್ರಾವಮಂ ತಿಗ್ಮಕರನಮಳಮಾಣಿಕ್ಯಸಂತಾನಮಂ ನಿ ।
ರ್ಮಳಜಾತಿಜ್ಯೋತಿತೌಘಂ ಮೃಗಮೊಱಗಿದ ಚಂದ್ರಾಶ್ಮಮಂ
ಚಂದ್ರಬಿಂಬಂ ॥

ಪೊಳೆಯುತ್ತುಂ ಪೋಲೆ ನೀಳಾಚಳವುನಡಕಿಲಿಟ್ಟಂತೆ ತೋರ್ಕುಂ
ತದುಚ್ಚಾ್ರ।
ಚಳಚೂಡಾಚಕ್ರದೊಳ್ ಚುಂಬಿತ ಜಲಧರದಿವ್ಯಾಪಗವ್ಯೋಮ-
ಮೊಂದುಂ ॥ ೨೯ ॥

ನೀಳದ ಸರಿಗೆತ್ತೆಱಿಗಿದ।
ಬಾಳಮಯೂರಿಗಳನೆತ್ತಿ ನೆಗೆವುವು ನಗದೊಳ್ ॥
ಗಾಳಿ ಕ್ಕೊಳೆ ತಳರ್ವ ಜಳಧರ।
ಜಾಳಂ ಕೆಳೆತನಕೆ ಮೆಚ್ಚಿ ಕೊಂಡಾಡುವವೋಲ್ ॥ ೩೦ ॥

ಮುತ್ತುವ ಮುಗಿಲಿಂದುಗುವೆಳ।
ಮುತ್ತುಂ ಕಿಸುಗಲ್ಲುಮಲ್ಲಿ ಬನಗಲ್ತಿಲೆಪ ॥
ಬರ್ತ್ತಿರೆ ಖಚರರ್ ಬೆಳಗಿನ।
ಬಿತ್ತುಗಳಂ ತಳಿದ ತೆಱದೆ ತೊಳಗಿದುವದಱೊಳ್ ॥ ೩೧ ॥

ಸೋಗೆಯ ಸೋಕಕ್ಕೆಂದುಂ।
ಪೋಗದ ಬಹುರತ್ನರುಚಿರರುಚಿ ಸುರಚಾಪ ॥
ಶ್ರೀಗಂ ಬಯಸಿರ್ಪಂತೆವೊ।
ಲಾಗಳುಮಗಲವು ಮುಗಿಲ್ಗಳಾನಗತಟಮಂ ॥ ೩೨ ॥

ಒಣಗಿಸುವರ್ಕಂಗಗಿದೊಂ।
ಣೆಯುರವೊಂದೆವಸಿವಿಡುವ (?) ಮುಗಿಲಿಂ ಮುಸುಱಿ ॥
ರ್ದಣೆಯ ಮಱಿವೊಕ್ಕ ದುರ್ವಾ।
ರಣಮೆನೆ ಮರಕತದ ಕಲ್ಗಳೊಪ್ಪಿದುವದಱೊಳ್ ॥ ೩೩ ॥

ನೀಳದ ಕೋಡುಂಗಲ್ಗಳ।
ಲೋಳದ್ಯುತಿ ಮುಸುಱಿ ಮುಸುಳೆ ಮೋಗಣೆನಿಂ ತಾ ॥
ರಾಳಿಯು ಹಾರಿಯು ಬಟ್ಟೆಗೆ (?)।
ಶೈಳಂ ಬರತೊಲಗಿದಂತೆ ಕೆಲದೊಳ್ ತೋರ್ಕುಂ ॥ ೩೪ ॥

ಕತ್ತುರಿಮಿಗಗಳ ಮಗಮಗಿ ।
ಸುತ್ತುಂ ಸೊವಡೆರ್ದ ಪಕ್ಕೆದಾಣದ ಪುಲ್ಲಂ ॥
ಮುತ್ತಿದ ಮದಾಳಿ ಚೆಲ್ವಂ ।
ಮುತ್ತಿದುದಗತಟದೊಳೊಗೆದ ತೃಣಮಣಿಗಣದಿಂ ॥ ೩೫ ॥

ಪರಿದಡರ್ದ ಪಂಚರತ್ನದ ।
ಮರೀಚಿಯಿಂ ನೀಳ್ದ ಪಳಿಕಿನೊಡ್ಡುಂಗಲ್ಗಳ್ ॥
ಬರೆದಿರ್ದ ಭಿತ್ತಿಯಂತಿರೆ ।
ಬರವಂ ಕುಡುವುವು ನಿರೀಕ್ಷಣಕ್ಕಗತಟದೊಳ್ ॥ ೩೬ ॥

ಕೋಡಿಸುವ ಚಂದ್ರಕಾಂತದ ।
ಕೋಡುಂಗಲ್ಗಳಿನೊಸರ್ತ ರಸದ ಪೊನಲ್ಗಳ್ ॥
ಸೇಡುವಡೆ ಕವಿಯೆ ಗಿರಿಗೆಡೆ ।
ಯಾಡುವ ವಿಧು ನಾಂದು ನಸೆದು ಹಿಮಕರನಾದಂ ೭॥

ಪೂಗೊಯ್ವ ಖಚರಿ ಶಿಖರದ ।
ಪೂಗಿಡುಗಳ ಕೊಂಬಿನಲ್ಲಿ ತೊಡರ್ದಿರೆ ವಿಮಾನ್ಗಳ್ ॥
ಪೂಗೆತ್ತು ತುಡುಂಕುವಳಿನ ।
ಲಾಗಿರಿಯುನ್ನತಮನಿನ್ನದೇಸಂ ಪೊಗೞ್ವೆಂ ॥ ೩೮ ॥

ಅಪ್ಪಿದೊಡಗಶಿಖರದ ಕೊಳ ।
ದುಪ್ಪಳಮಂ ಕಂಪುವತ್ತಿ ಪಾಯ್ವಳಿತತಿ ತಾ ॥
ಸಪ್ಪುದಿದೆನ್ನಡೆ ಮೞೆದುವು ।
ದಪ್ಪೊಡೆ ಕೞೆಯೆನ್ನೆನಿಂದುಬಿಂಬದ ಕುೞಿಪಂ ॥ ೩೯ ॥

ಕೞಿದಾಳಿವರಲ್ಗಳನಣೆ ।
ಗೆೞೆಪ ಮುಗಿಲ್ದುೞುಗಲೆಸೆದುವಗಶಿಖರಂ ತ ॥
ಟ್ಟುೞೆಯೆ ಸುರಿದುಡುಗಳಂ ಪೞಿ ।
ವೞೆದೊಯ್ಯನೆ ಬೀೞ್ವ ಗಗನಭಂಗಂಗಳವೊಲ್ ॥ ೪೦ ॥

ಮಱೆದು ಗಿರಿತಟಪೊಳೆಲ್ಲಿಯುಂ ।
ಮೊಱಗಲೊಡಂ ಪೊರೆದು ಪೊನ್ನ ರಜದಿಂ ಮೆಯ್ಗಳ್ ॥
ಮಿಱುಮಿಱನೆ ಮಿಱುಗೆ ಪೊಸಪೊ ।
ನ್ಮಱೆಯಂತಿರೆ ಪರೆವುವಲ್ಲಿ ಹರಿಣಗಣಂಗಳ್ ॥೪೧॥

ಗಡಣದೊಡನೆಱಗಿ ಮುಗಿಲೊಡೆ ।
ದೊಡೆ ಪೆಱಗಿರಲಗಿದು ಗಗನಚರಿಯರ್ ಬಿಸದಂ ॥
ಬಡೆದು ಗಿರಿಶಿಖರದಿಂದಂ ।
ಕುಡುಮಿಂಚಂ ಪಿಡಿದು ಬಿಟ್ಟವೋಲ್ ಪೊಳೆದೊಗೆವರ್ ॥೪೨॥

ಅಂತೆಸಿಪಗಿರಿಯಿಂ ದೇವಗಿರಿಗೆ ಗೊಂದಣದೆ ಪಾರುವ ವಿಯಚ್ಚರೀ ವಿಯಚ್ಚರರ ಕಱಿದ ಪೂಮಾಲೆಗಳಿನಲ್ಲುಗುವ ಕುಸುಮರಸದ ಸೊನೆಯಿಂ ನಾಂದು ಪರಮಾನಂದದಿಂ ಸಿಂದು ಮಕರಂದನುಂ ಗುಣಮಕರಂದಮಧುಕರನುಂ ಆಗಳ್ ಮೇಗಂ ನೋಡುತ್ತುಂ ನಡೆಯೆ ನಡೆಯೆ !

ಮಾಸಱಮೆಲ್ಲಿಯುಂ ನೆರೆವ ಖೇಚರದಂಪತಿಗಳ್ಗೆ ಕಂತುಕೈ ।
ವೀಸಲೊಡಂ ತಿರಸ್ಕರಿಣಿಯಪ್ಪವು ಬಾಯ್ದೆಱೆಯೊತ್ತೆ ವಾರಿಯಂ ॥
ಸೂಸುವ ವಾರಿಯಂತ್ರಚಯಮಪ್ಪವು ಚಿತ್ತಜತಾಪಮೆತ್ತೆ ನೀ !
ರ್ವಾಸುಗಳಪ್ಪವೀನಗದನೀಲಮಣಿಪ್ರಭನೀರದಾದಿಗಳ್ ॥೪೩॥

ಬಾಡಿದ ಮಾಲೆವೂವೊಡೆದು ಸೂಸಿದ ಕೈವಳೆ ಘರ್ಮಗಂಧದಿ ।
ಪೋರ್ಡದ ಸುಯ್ಯೆಲರ್ ಸುರತಸೌರಭಮಂ ಬಲವರ್ಪ ತುಂಬಿಯ ॥
ಱ್ಕಾಡಿದ ತಂಬುಲಂ ಕೆದರಿ ಪೋದಲವಾರ್ಸಿಸ ಕುಂಕುಮಂ ರತ ।
ಕ್ರೀಡೆಯನೆಯ್ದೆ ಸೂಚಿಸುವುವಲ್ಲಿಯ ಚೂತಲತಾಗೃಹಂಗಳೊಳ್ ॥೪೪॥

ತಳೆದು ಪೆಗಲ್ಗಳಿಂದೆ ವಿಪರೀತರತಶ್ರಮದಿಂದೆ ಪಾಱಲಾ ।
ರ್ಗಳವಱದಿರ್ದ ಖೇಚರಿಯರಂ ಕರಜಕ್ಷತದಿಂದೆ ಬಾಸುಱೆ ॥
ರ್ದೊಳುದೊಡೆಯಂ ಕಟಾಕ್ಷದೊಳೆ ಮೆಯ್ಮಱೆದೀಕ್ಷಿಸುತುಂ ನಿಜಾ[illegible] ।
ದಳಿಗಳ ಬಟ್ಟಿದಪ್ಪಿ ಮಿಗೆ ಪಾಱುವರೀಗಿರಿಯೊಳ್ ನಭಶ್ಚರರ್ ॥೪೫॥

ಸವಿ ಸಮನಾಗೆ ಸುತ್ತಿಱಿದ ತೋಳ್ ಸತವಾದೆರ್ದೆಯಿಪಂಲಂಪಸ ।
ಪ್ಪುವ ಬಗೆ ಬೀಗಿ ಬಾಯೊಳಗೆ ಸಿಲ್ಕಿದ ಬಾಯ್ ಬೆಱಗಾದ ಬೇರ್ಗೆ ಸೋ ।
ಡುವ ಜವವೋಡಿದಚ್ಚರತದಚ್ಚುಡಿದಂತಿರೆ ಕಾಮಸೌಖ್ಯದಿಂ ।
ಸವೆದವೊಲಿರ್ಪುವಲ್ಲಿ ಗಗನೇಚರದಂಪತಿಗಳ್ ರತಾಂತದೊಳ್ ॥ ೪೬ ॥

ಮುಳಿದು ಕನಲ್ದರಲ್ಲಿನಿಯರಂ ಬರೆದಂಗಜಮೋಹದಿಂ ಶಿಳಾ ।
ಫಳಕಮನಪ್ಪಿ ಮೆಯ್ಯ ಬೆಮರಿಂದಮೆ ನಲ್ಲರ ಮೆಯ್ಯನಾವಗಂ ॥
ತೊಳೆದವೊಲಾಗಿ ಪೋಗೆ ಮಗುೞ್ದೀಕ್ಷಿಸಿ ಕಾಣದೆ ಮಾಣದಂತದುಂ ।
ಮುಳಿದೆಲೆ ಪೋದುದೆಂದಱಿದಪರ್ ಗಿರಿಯೊಳ್ ಸುರಸಿದ್ಧ–
ಮುಗ್ಧೆಯರ್ ॥ ೪೭ ॥

ತರಳತಟಿಲ್ಲೋಚನದಿಂ ।
ಗಿರಿಗೆರಗುವ ಮುಗಿಲ ನೋಡಿ ಮಿಗೆ ನಾಣ್ಚಿಕೆಯಿಂ ॥
ಪುರುಷಾಯಿತದಿಂ ಪ್ರಿಯರೊಳ್ ।
ನೆರೆವ ನಭಶ್ಚರಿಯರಗಿದು ಪಾಱುವರಿದಱೊಳ್ ॥ ॥ ೪೮ ॥

ಸುರತಶ್ರಮದಿಂ ಪಾಱುವ
ಭರಮಿರ್ಕೋರಡಿಯನಿಡಲುಮಳವಿಲ್ಲದೆ ಖೇ ॥
ಚರವರಮಿಥುನಂಗಳ್ ಭೂ ।
ಚರವರಮಿಥುನಂಗಳಾದುವೀ ಗಿರಿವರದೊಳ್ ॥ ॥ ೫೦ ॥

ಬೆರಸದಿರೆ ನಣ್ಪಿನಿಂ ಕಿ ।
ನ್ನರಿಯಿಂಚರದೊಡನೆ ತನ್ನ ಕಿನ್ನರಿಯ ಸರಂ ॥
ಬೆರಲಂ ಮಿಡಿಯದೆ ಮಱೆದುಂ ।
ಬೆರಲಿಂ ಮಿಡಿದಪರೆ ಕಿನ್ನರರ್ ಕಿನ್ನರಿಯಂ ॥

ನಸುಸೋಂಕೆ ಪಾಡಿ ಕಿನ್ನರಿ ।
ರಸಮೊಸರ್ವಿನಮೊಸರ್ವ ಬೆಮರ ಬೆರಲ್ಪನಿಯಿಂ ತ ॥
ಣ್ಣಸಗೊಂಡ ತಂತಿಗಳನಾ ।
ಱಿಸುವರ್ ಬಿಸುಸುಯ್ದು ಕಿನ್ನರರ್ ಬೀಣೆಗಳಂ ॥ ॥ ೫೧ ॥

ಪರಿಭವಿಸೆ ತಮ್ಮನೀ ಕಿ।
ನ್ನರಿಯರ ದನಿ ಮೂಗುವಟ್ಟ ಕೋಕಿಲೆ ಮಧುಚೂ ॥
ತರಸಾಸ್ವಾದಸಮುದದಿಂ।
ಕರೆವುವು ಕಡೆಸೋರ್ಕಿದವರ್ಗೆ ಲಜ್ಜೆಗಳೊಳವೆ ॥ ॥ ೫೨ ॥

ಎಂದು ಪಾಱಿ ಪೋಪ ನವೀನವಿದ್ಯಾಧರಿಯರನೀಕ್ಷಿಸುತ್ತುಂ ವಿವೇಕ ವಿದ್ಯಾಧರನಾ ಭೂಧರಸಿತಂಬಮುಂ ನಿಜಮನೋಹರೀಪಯೋಧರನಿತಂಬಮುಂ ಮುಟ್ಟುಪಂತೆ ಮುಟ್ಟಿ ಪರಮಾನಂದಮಂದಮಾನಸನಾಗಿ ಮುಂದೆ ಮಂದೈಸಿದ ಮಾಣಿಕವೆಟ್ಟದ ಬೆಳಗುದೊಱೆಯೊಳ್ ಪಱಿಗೋಲಂತೆ ಪರಿವ ಕರಿಯ ಮುಗಿಲ್ಗಳನೇಱಿಸಿ ಭೂಚರತರುಣಿಯರ್ಗೆ ಗಗನಗಮನಮನ ಭ್ಯಾಸಂಗೆಯ್ಸುವ ಗಗನೇಚರಚತುರೆಯರುಮಂ, ಜಲಕ್ರೀಡೆಯಾಡಿ ಪೋದ ಕಿನ್ನರಕನ್ನೆಯರ ಕುಚಮಲಯಜದಿಂ ಬೆಳರ್ವಟ್ಟು ತೆರೆಗುಟ್ಟಿದ ತಿಳಿಗೊಳಂ ಗಳೊಳಂ, ಪಳಿಕಿನ ಪಾಸಱೆಗೆತ್ತು ಪಾಱಿ ಬಂದೆರಗಿದ ಕಮಳಮನಗೆ ಯಿಡುವಂತೆ ಕಾಲನಿಟ್ಟಗಿದು ನೆಗೆದು ಕೆಲದ ಮುತ್ತಿನ ಪಡುಸೆಳೆಗಳೊಳ್ ಮುಡಿಯ ಮುಗುಳನೀಡಾಡಿಯುವತರಿಸುವ ವಿದಗ್ಧವಿದ್ಯಾಧರಿಯರುಮಂ, ಬಱಿದೆ ಮುಳಿದು ಪಾಱುಗೆಯ್ತ್ತದಿಂ ಕಣ್ದಪ್ಪಿಪಾಱಿರತ್ನಭಿತ್ತಿಗಳೊಳ್ ಪರಿವ ತಮ್ಮ ನೆೞಲ ಬೞಿಯನುೞಿಯದೆ ಪರಿದೋಪರ್ ಪಿಡಿಯೆ ಪಿಡಿದಂತೆನಿಂದ ನೆೞ ಲ್ಗಳ ಕಾಲ ಮೇಲೆ ಕವಿದು ಬಿೞ್ದಿಚ್ಚೆಗಂಗೊಳ್ವಿಚ್ಚೆಗಾಱಿರ ಕಣ್ಣಂ ಮುಚ್ಚುವ ಧೂರ್ತವಿಯಚ್ಚರಿಯರುಮಂ, ಆತ್ಮನಾಥನುಟ್ಟುದಂ ಸೆೞೆದು ಕಳೆಯೆ ಕೆಲದ ಮುಗಿಲಸುಟ್ಟುಕೊಳಲ್ಪೋಪ ಮುಗ್ಧನಭಶ್ಚರಿಯರುಮಂ, ಕೇಳೀ ಕಲಹದಿಂದುೞಿದ ನೀಱೆಯನಱಿಸಿ ಮುಗಿಲಮಱೆಯೊಳ್ ಪೊಳೆವೆಳಮಿಂಚ ನಪ್ಪುವ ಕಾಮಾಂಧಖಚರರುಮಂ, ಮುನಿದು ಪೋದ ಮನಃಪ್ರಿಯರು ನ್ನತಮಣಿಗಂಡಶೈಲಮನೇಱಿಕೊರಲಂ ನೀಡಿ ನೋಡೆ ನಸುದೋರ್ಪ ಕುಂಕುಮಾಂಕಿತ ಮುಖಮಂಡಲಮುಂ ಮೂಡುವ ಚಂದ್ರಮಂಡಲಮೆ ಗೆತ್ತು ಸುಗಿದು ಪಾಱುವ ಕಾಮಾರ್ತಖೇಚರರುಮಂ, ಒರ್ವನನಪ್ಪಿ ಮದನ ಮೂರ್ಛೆಯನಿಕ್ಕಿ ಮತ್ತೊರ್ವನಂ ಚುಂಬಿಸುವ ಗಂಧರ್ವಗಣಿಕೆಯರುಮಂ, ಭುಜಲತೆಯಂ ನೆಮ್ಮಿದ ಭುಜಂಗಂಗೆ ನಿಜಾನುರಾಗಮನಸುಕರಿಸುವ ನೆವದಿ

ಸಿಂದುಕಾಂತದ ಕೇರ್ಗಳೊಳ್ ಪೊಳೆವಾತಸ ನೆೞಲಂ ಸಲಿದಪ್ಪಿ ಚುಂಬಿಸಿ
ಪತಿಯ ಪೊರೆಯೊಳ್ ಪರಪುರುಷಪರಿಷ್ವಂಗಮಂ ದ್ವಿಗುಣಿಸುವಂತೆಯುಂ
ನಿಜಸ್ವಭಾವಮನವಂಗೆ ತೋರ್ಪಂತೆಯುಮಿರ್ಪ ಕಿಂಪುರುಷವೇಶ್ಯೆಯ-
ರುಮಂ, ನೀಳರುಚಿಯ ಡಾಳಮಂ ಪೊಕ್ಕಗಲ್ದು ಪೋಗಿ ಮಣಿಶಿಲೆಯೊಳ್
ಮಾರ್ಪೊಳೆವ ತನ್ನ ನೆೞಲನಿನಿಯಳ್ಗೆತ್ತು ಚುಂಬಿಸುವ ಚಕ್ರವಾಕಂಗೆ
ಪುರುಡಿಸಿ ಪರಿತಂದು ಚರಣಪ್ರಹಾರಮನೀವ ಚಕ್ರವಾಕಿಗಳುಮಂ, ಸುರ
ಸುಂದರಿಯರ್ ಸೆಂದುರಮಂ ತೀವ ಪಚ್ಚೆಯ ಕಿಗ್ಗಲ್ಗಳಂ ಗಿಳಿಗಳ್ಗೆತ್ತು
ಸಾರ್ವ ಸಾರಿಕೆಗಳುಮಂ, ಸಿದ್ಧಸೀಮಂತಿನಿಯರ ಸೋರ್ಮುಡಿ ವಿಡೂರ
ಗ್ರಾವದೊಳ್ ಪತ್ತುವ ಪಾವಿನಂದದಿಂ ಪ್ರತಿಬಿಂಬಿಸೆ ಬಂದು ಪಿಡಿದು
ಕರ್ದುಂಕುವ ಕಳಾಪಿಗಳುಮಂ ಸುರತಸುರಭಿಯರಪ್ಪಂಬರಚರಿಯರ
ಬೆಮರ್ವನಿಯುಮಂ ನುಂಗಿ ಮುಗಿಲ ಪನಿಗೆ ಮೊಗಸಲಾಱದಿರ್ಪ ಚಾದಗೆ
ಗಳುಮಂ, ಮನುಜವನಿತೆಯರ ನಡೆಯನಱಿತ್ತುವಟ್ಟು ನೋಡಿ ತಾಮು
ಮಲತಗೆಯೊಳಡಿಯೂಡಿ ನಡೆಗಲ್ವ ವಿಯಚ್ಚರಿಯರ ಪಜ್ಜಳಿಪ ಪಜ್ಜೆಗಳಿಂ
ಕೆಂದಾವರೆಗೊಳಗಳಂತಿರ್ಪ ನೀಳಮಣಿಶಿಳಾತಳಕ್ಕೆ ಭೋರೆಂದೆಱಗುವ
ಕೊಳರ್ವಕ್ಕಿಗಳುಮಂ, ಕಂಠನಾಳಮನಾಡಿಸುತ್ತುಮಿಕ್ಕೆಲನಸಲಸದವ
ಲೋಕಿಸಿ ಕಿಸುಗಲ್ಲ ಸೆಱೆಯುಂ ಸರಿಗೆಯ್ದುರಾಜಾವರ್ತಕ್ಕೆಜೀವಂಬೊಯ್ದುಂ
ತಿರ್ದ ಜೀವಕಮಿಥುನಂಗಳುಮಂ ವಜ್ರವೇದಿಕೆಯೊಳ್ ವಿದ್ಯಾಧರಿಯರ
ವದನಬಿಂಬಗಳನಂಬುಜಂಗಳ್ಗೆತ್ತು ಖಂಡಿಸಿ ಕಸಲ್ವ ಕಳಹಂಸಂಗಳುಮಂ,
ಚಂದ್ರಕಾಂತದ ಬೆಳಗಂ ಬೆಳ್ದಿಂಗಳೆಂದೆ ಕಾದುಕೊಂಡಿರ್ಪ ಚಕೋರಿಗ
ಳುಮಂ, ಕಪ್ಪುರದಿಱುಂಬುಗಳೊಳ್ ಬೆರಸಿ ಸೂಸಿ ಕರಗಿ ತಮ್ಮನಱೀಪು
ವಾಲಿವರಲ್ಗಳಿಂ ಪೊಂಬಣ್ಣದ ಗಂಧಮೂಷಕಂಗಳ್ ತೋಡಿದ ಪೊನ್ನರಜದ
ಕುಪ್ಪೆಗಳುಮಂ, ಉರ್ವಿ ಬೀೞ್ವ ಪೆಱದರಿಯಿಂ ಬಿಱೀದು ಬಾಯ್ದೆಱೆದ
ತಟ್ಪಿಲೊಳ್ ಮಾಣಿಕದ ಪಗವಂ ತೆಗೆವಂತೆ ಕುಳ್ಳಿರ್ಪ ಮದನನಿವಾರ
ಣನಾ....ದೇವಿಯನಾರಾಧಿಸುತಿರ್ಪ ವಿದ್ಯುಲ್ಲೇಖೆ ಚಂದ್ರಲೇಖೆಯುಮೆಂಬ
ವಿದ್ಯಾಧರಿಯರ್ ಕಂಡು ಪಾಡಿವದ ಪೆಱೆಯುಂ ಕಂಡಂತೆಱಗಿಪೊಡೆಮಟ್ಟಲ್ಲಿಗೆ
ಸಮೀಪದೊಳಿರ್ದ ಚಂದ್ರಕಾಂತಗುಹಾಗೇಹಕೊಡಗೊಂಡು ಪೋಗಿ ಪಿರಿದು
ಮೊಸೆದಭ್ಯಾಗತಪ್ರತಿಪತ್ತಿಯಂಕುಡೆ ಕೈಕೊಂಡು ಬಂದಾ ದೇವತೆಯು

ಮುಂದಣುತ್ತರಂಗಳೊಳ್ ಬರೆದಿರ್ದ ಸಿದ್ಧಾದೇಶಮಂ ನೋಡಿ ಮಱು-
ದೆವಸಂ ಕೃಷ್ಣಚತುರ್ದಶಿಯಾಗೆ

ಆರಾಧಿಸಿದಂ ದೇವಿಯು ।
ನಾರಾತ್ರಿಯೊಳಮುಳಗಂಧಪುಷ್ಪಾದಿಗಳಿಂ ॥
ಭೋರೆನೆಸಮಟಯುಸೆ ಖಚರಕು ।
ಮಾರಿಯರುಂ ಕೆಳೆಯುನುಂ ಕಳಾರ್ಣವತೀರಂ ॥೫೩॥

ಆಗಳ್ ಗರ್ಜಿಸಿ ಪಾಯ್ವ ಪುಲಿಗಳುಮಂ, ಕೊಂದು ತಿಂಬ ಕುಕ್ಕುಟ ಸರ್ಪಂಗಳುಮಂ, ಸೀೞ್ದು ಪರಪುವ ಸಿಂಗಂಗಳುಮಂ; ತೀಡಿಯುಗಿವ ಸೀೞ್ನಾಯ್ಗಳುಮಂ, ನುಂಗಿಯುಗುಳ್ವಜಗರಂಗಳುಮಂ, ಸುಯ್ವ ಪಾವಂ ಪೊಯ್ವ ಸಾಧಕರುಮಂ, ಬೊಬ್ಬಿಱಿವ ಭೂತಂಗಳುಮಂ, ಬಾಯ್ದೆಱೆವ ಬೇತಾಳಂಗಳುಮಂ, ಬಿಸುನೆತ್ತರಂ ಪಾರ್ವ ಕಾಳರಕ್ಕಸಿಯರುಮಂ, ಬೆಟ್ಟಮನಿಕ್ಕುವ ಜಟ್ಟಿಗಳುಮಂ, ಪೊಟ್ಟೆಯೊಳ್ ಬಾಯಂ ತೆಱೆವ ಪೂತನಿಯರುಮಂ, ಉರಿಯನುಗುೞ್ವ ಕಾಮುಕರುಮಂ, ಪೊಡೆವ ಸಿಡಿಲಂ ಕರೆವ ಕಾರ್ಮುಗಿಲ್ಗಳನೇನೆಂದಱಿಯದೆ ತನ್ನನೆ ತಾನಱಿದಗುರ್ವಿಸುವ ವಿಗುರ್ವಣೆಯುಂ ಬಗೆಯದೆ ಶ್ರೀಪಾರ್ಶ್ವಭಟ್ಟಾರಕರನೆ ಬಗೆದು ಕುಳಸಗದಂತನಾಕುಳನಾಗಿ, ಕೆಯ್ಯಿಕ್ಕಿರ್ದಭಿಮಾನಮೇರುವಿಂಗೆ ಕ್ಷಣಕ್ಕೆ ಮುಕ್ತಿಕುಚ ಮುಕ್ತಾಮಣಿಯುಪ್ಪುದನಱಿದು ಕಾಲದೊಳ್ ಕರ್ಮಕ್ಷಯಮಾಗೆ ಪರಮಾಗಮಕ್ಕೆ ಪುಸಿಪೊರ್ದದೆಂದು ಬೆಚ್ಚಿದಂತೆ ಚಕ್ರೇಶ್ವರಿ ಘೋರೋಪಸರ್ಗಮಂ ಪಿಂಗಿಸಿ ಪ್ರತ್ಯಕ್ಷೆಯಾಗಿ ಕೆಯ್ಕೊತ್ತುವುದೆಂದು ಕೆಯ್ಯೊಡ್ಡಿ ಬೇಡಿಕೊಂಡ ಪಂಡಿತರ್ ಕಂಡೊಡೆ ಕಾಳಾವಲೋಕಿಸೀಪ್ರಭಾವಂ ಕಿಡುವುದೆಂದು ಕುಡದೆ,

ಪಡೆದಂ ಸಿದ್ಧರಸದ ಪೊಂ ।
ಗೊಡನುಮನಾಗಾಮಿಕಾಲಮೂರ್ತಿಗೆ ಮಣಿಗ ॥
ನ್ನಡಿಯೆನೆ ತೋರ್ಪರ್ಕ್ಕರವೆಡೆ ।
ಯುಡುಗದ ಕಾಳಾವಲೋಕಿನೀಫಳಕಮುಮಂ ॥೫೪॥

ಅಂತು ಪಡೆದು ಕವಿಚಕ್ರವರ್ತಿಯಾಚಕ್ರೇಶ್ವರಿಯ ಭವನದಿಂ

ಬೆಳಗಗಾಲೊಡನೆ ಪೊಱಮಡುವಾಗಳ್ ಕಾಲತೊಡರ ಕೊರಲ ವೇಷದ
ಕೊಯ್ಯುದ್ಧರದ ಕಡಿದಬೆರಲ ಮೊಗದರಿಸಿನದ ಕೊಱೆದ ಮೂಗಿನ ವಿಡಂಬನಮೆ
ತೊಡವಾಗೆ ಸಪ್ತವ್ಯಸನದಿಂ ಸಮೆದಂತೆ ಬರ್ಪ ಬಯಲಭಟ್ಟರುಂ,
ಕೌಂಕುಳಿ ಸಿವಡಿಯು ಕೆಲದಡಪದ ಪಿಡಿದ ಕೊಡೆಯು ಪಟಾಟೋಪದಾಡಂಬ
ರಮಗುರ್ವುವಡೆಯೆ ಲೋಕದಕಥೆಯುಂ ಕಬ್ಬಮುಂ ಮಾತುಂ ಬಾಯ್ವೆಣ್ಣೆ
ಯಾಗೆ ಧೂರ್ತವೃತ್ತಿಯೆ ದಾಱಿಯಾಗೆ ಬಳೆದು ಕೈವಾರಕ್ಕೆ ಕಾದಿ ಕಲಿ
ಯುಮೋದಿ ಪಡೆದೆತ್ತಿಸಿದ ಬಿರುದುಂ ಬೆರಸಿ ಬರ್ಪೊರ್ಳಕ್ಕರಿಗರುಂ ಬಳಸಿ ಬರೆ,

ಪಱಿಯ ಝುಱಿಂಬಮುಜ್ಜಳಿಪ ಮುದ್ರಿಕೆ ಬಣ್ಣದ ಸೀರೆ ಹೇಮಪುಶ್ಯಂ ।
ಬಳೆ ಮಣಿಮಾಳೆ ದೂಳೆಯುದ ಕಂಕಣಮಿಟ್ಟ ತ್ರಿಪುಂಡ್ರವಣ್ಪು ತೋ ॥
ಳ್ವಳೆ ತಲೆಸುತ್ತು ಪಲ್ಲವದ ಸತ್ತಿಗೆ ಕೀರ್ತಿಪತಾಕೆ ತನ್ನೊಳೊ ।
ಳ್ಪಳವಡೆ ಬಂದನಂದು ಗಜಭಟ್ಟನೆನಿಪ್ಪನಪೂರ್ವವಿಭ್ರಮಂ ॥೫೫॥

ಅಂತು ಬಂದು ಶುಭೋದಯಮೆಂದು ಮುಂದೆ ನಿಂದು,

( ಸಂಸ್ಕೃತ )

ಶ್ರೀಮಾನ್ಮಾನಾವತಾರೋ ವಿತರಣತರುಣಃ ಪ್ರಾಜ್ಯಶೈಲಾವತಾರಃ ।
ಕೀರ್ತಿಃ ಕಾಮಾವತಾರೋ ವಿಭವಸುಮನಸೋ ಗಂಧಗರ್ಭಾವತಾರಃ ।
ಬುದ್ಧೇ ರೂಪಾವತಾರೋ ಗುಣಮಯವಪುಷಃ ಪೂರ್ಣಜೀವಾವತಾರಃ
ಕಸ್ತೇ ಕಂಥಾವತಾರೋ ಜಯತಿ ಬುಧಪತಿರ್ಬಾಣಭಾಗ್ಯಾವತಾರಃ॥೫೬॥

ಯಜ್ಜನ್ಮಶ್ರೀವಿವೇಕಪ್ರಣಯಗುಣಲಸತ್ಕೋಕಯೋಸ್ಸುಪ್ರಭಾತಂ ।
ಯತ್ಕೀರ್ತಿಸ್ಫೂರಿಚೇತೋಮೃದುಕರಮಣಿಸೌಖ್ಯಶ್ರುತೇಶ್ಚಂದ್ರ-
ಮೂರ್ತಿಃ ।
ಯದ್ಭಾಗಂ ಬೋಧನಾಥಸ್ಸುಕವಿ ಮಣಿಜನೇಃ ಕಾವ್ಯವೈಡೂರ್ಯ
ಸೂತಿಃ ॥
ಸೋಯಂ ಸೌಜನ್ಯಸಿಂಧುರ್ಜಯತಿ ವಿಜಯತೇ ಕಾವ್ಯಕರ್ಣಾವ-
ತಂಸಃ ॥೫೭॥

( ಪ್ರಾಕೃತ )

ಆಗಾಸೇಣಿಂದಮಾಹಿಂದಸಿವಿಸಸಿಯಣಂ ಮೇರಣೋಪಾಯರಂಭಂ ।
ಕಿಂಭೇದಂ ಬಂಧಕಂಪಂ ಪಸವಸಿಹಿಯಯೇ ರಾಹುಣೋ ಹೋಸಿದಂಕೋ॥
ಯೆಂಕೇ ಹಿಂಸೋ ಜಸೇಹಿಂ ಣಯವಯಣಸುತಾಸಂಥವೋ
ಹಿಂಗುಣೇಹಿ ।
ಝ್ಝೀಣಂ ಜಾಯಂ ಪಿಜಾಯೇ ಜಯಯಿ ಜಯಯಿ ವಣ್ಣೇ ಪಿಚಂದೋ
ಕವೀಂದೋ ॥೫೮॥

( ಸಂಸ್ಕೃತ )

ವಿಹಾಯ ವಿಷ್ಣುಧಾತಾರೌ । ನೆವಿಂಚಂದ್ರೇಣ ಸಂಗತೇ ॥
ಶ್ರೀವಾಚೌ ಶಂಭುರಾಲೋಕ್ಯ । ದೇಹಾರ್ಧೇಽಕೃತ ಪಾರ್ವತೀಂ ॥೫೯॥

ಎಂದೋದಿದಕ್ಕರಿಗಂಗೆ ವಿತರಣಮುಗ್ಧಂ ಮುಕರಂದನಿಂ ಸಿದ್ಧರಸಂದೀವಿದ ಪೊಂಗೊಡನಂ ಕುಡಿಸಿ,

ಪುದಿದ ಭವದ್ಯಶೋವಿಶದಸಿದ್ಧರಸಂ ಸಲೆ ಸೋಂಕೆ ನಿತ್ಯಮಾ ।
ದುದು ದೆಸೆ ಕಾಂಚನಾದ್ರಿಯೆನಿಸಿತ್ತು ಸುರಾದ್ರಿಸುವರ್ಣವರ್ಣಮಾ ॥
ದುದು ರವಿರಶ್ಮಿ ತನ್ನ ಸಮಮಾಯ್ತೆನೆ ಚಂದ್ರಿಕೆ ಪೇೞ್ ಪರಾರ್ಥಮು ।
ಪ್ಪುದು ಪಿರಿದಾಯ್ತು ನೀಂ ಪಡೆದ ಸಿದ್ಧರಸಂ ಕವಿರಾಜಕುಂಜರಾ ॥೬೦॥

ಎಂದು ಪೊಗೞ್ದಿಕ್ಕರಿಗಂ ಪೋಗೆ ಕಂದರ್ಪದೇವನಾಮಯೂಖ ನಿರ್ಝರಗಿರಿಯ ಮನೋಹರತೆಗಮಾವಿದ್ಯುಲ್ಲೇಖೆಯುಂ ಚಂದ್ರಲೇಖೆಯುಂ ಮಾೞ್ಪಿ ನಿರುಪಾಧಿವಿಶುದ್ಧಬಂಧುಕೃತ್ಯಕ್ಕಮಾನಿಜಾಂತರಂಗ ಲಗ್ನಸ್ಮರವೈಶ್ವಾನರಪ್ರಶಮಕರಶಿಶಿರೋಪಚಾರಕ್ಕೆ ನೆಱೆವ ನವನಂದನ ವನಾಭಿನವಕುಸುಮಕಿಸಲಯಚ್ಛಾಯಾಚ್ಛಜಳಜಳರುಹನಿವಹಬಹಳಿಕೆ ಗಮುಗಲಲಾಱದಲ್ಲಿಯುಂ ಕೆಲದಿವಸಂ ವಿವಿಧವಿಹಾರವಿನೋದಮನೊದ ವಿಸುತಿರ್ಪಿನಮಾತನ ಮಾನಸಾನಳನನುದ್ದಮುರಿಪುವಂತೆ,

ಉಗುೞೆ ಮದಾಳಿ ನೆಯ್ದಿಲ ಮಧುದ್ರವಮಂ ಮನದೊಳ್ ಪಿಕಂ ಸರಂ।
ದೆಗೆಯೆ ಸರಂಗಳಂ ಶಿಶಿರಮಂ ಬಿಸಿಲಾಯ್ದು ಕುಱುಂಕೆ ಮೆಲ್ಲನ ॥
ಲ್ಲುಗೆ ಕೞಿವಂದ ಕುಂದದಲರ್ಗಳ್ ಗಿಳಿತತ್ತಿಯನಿಕ್ಕಿ ಪಕ್ಕಮಂ।
ನೆಗೆದೆಲೆದೊಂಗಲೊಳ್ ತೊಡೆಯೆ ತೀಡಿದುದೊಯ್ಯನೆ ದಕ್ಷಿಣಾನಿಳಂ ॥೬೧॥

ತದುಕು ತಳಿರ್ತುದಿಕ್ಕಿದುದು ಪಾದರಿ ಪಣ್ಣೆಲೆಯಂ ನಯಕ್ಕೆ ಬಂ।
ದುದು ಲತೆವಾಗಿ ತೂಗಿದುದು ಪೂಗುಡಿಯಿಟ್ಟದಿಮುರ್ತ್ತೆ ಮೂಡಿ ಮು ॥
ತ್ತದ ಮುಗುಳೊಪ್ಪಿ ತೋಱಿದುವಶೋಕೆಯ ಕೆಂದಳಿರುರ್ಚುತಿರ್ದುವೊ।
ತ್ತಿದುವೆಲೆ ಗಂಟನೊತ್ತವಿಸಿ ಕೋರಕಮಂ ನವಕರ್ಣಿಕಾರಕಂ ॥೬೨॥

ಸಿರಿಸದ ಕೇಸರಂ ಮುರಿಯೆ ಪಾಯ್ದುದು ತೂಱುವ ತುಂಬಿ ಮಾವು ಪೀ
ವರಮೆನೆ ಸೂಸಿದತ್ತು ಬಿರಿದಂಕುರಮಂ ಕಿಱುಗೊಂಬುಕೊಂಬಿನೊಳ್ ।
ಸುರಯಿ ಮುಗುಳ್ತು ಮುಂಚಿದುದು ಕೀೞ್ಸೞ್ತೊಳ್ ಕಳಿವಂಡಸುತ್ಪಳಂ।
ಸುರಿದೆಸೞ್ಕಿದತ್ತು ಶಿಶಿರಾತ್ಯಯಚೈತ್ರನವಪ್ರವೇಶದೊಳ್ ॥೬೩॥

ಶ್ರೀ ತೊಱೆದುತ್ಪಲಾವಳಿಯನಂಬುಜದೊಳ್ ನಿಲೆ ಮೊಲ್ಲೆಯುಂ ಕರಂ।
ಬೀತಿರೆ ಕೂರ್ತರೆಂಬ ಪೊಣರ್ವಕ್ಕಿಗಳೋತೊಡಗೂಡಿ ಶೀತಕಾ ॥
ಲಾತಿಶಯೇಂದುವಸ್ತಮಿಸೆ ಮಾಸಱಿಮಾದುದು ಸಂಜೆಯೆಂಬಿಸಂ।
ಚೂತವನಂ ತಳಿರ್ತುದು ನವೋದಯದೊಳ್ ಮಧುಮಾಸಮಿತ್ರನಾ ॥೬೪॥

ಪೊರೆವಿಡೆ ಸೋಂಕಿ ತೆಂಕಣೆಲರೂದಲೊಡಂ ಸ್ಮರದಗ್ಧಭೂಜಮಂ।
ಕುರಿಸಿರೆ ಚಿತ್ತಜನ್ಮನ ಲಸದ್ಭುಜಶಾಖೆಯೊಳೀಕೆ ವೀರಮಂ ॥
ಕುರಿಸದೆ ಬೀಟಮಂ ಬಳೆದು ಬಾೞ್ವ ಜನಂಗಳ ಚಿತ್ತಬೀಜಮಂ।
ಕುರಿಸದೆ ಚೂತಮೊಂದೆ ಪೊಸತಂಕುರಿಸಿತ್ತೆ ವಸಂತಮಾಸದೊಳ್ ॥೬೫॥

ಕೊಸರನೆ ಸಾರ್ದ ಕೋಗಿಲೆಯ ಸತ್ತ್ರಸರಂ ಪೊಸತಾಗಿ ಪುಟ್ಟಿತೆಂ।
ಬನಿತೆ ಬನಂಗಳೊಳ್ ಕೊಸರ್ವ ಕನ್ನಡವಕ್ಕಿಯನಾದಮೆತ್ತ ರು ॥
ದ್ರನ ಮುನಿಸಿಂದೆ ಬೆಂದತನುವುಂ ಮಱುವುಟ್ಟಿಗನಾದನಂದು ಮಾ।
ವಿಸ ಕಳಿಕಾರಸಂ ನವಸುಧಾರಸಮಲ್ಲವೆ ಚೈತ್ರಮಾಸದೊಳ್ ॥೬೬॥

ಕಲಿಕೆ ಕವಲ್ತು ಮೂಡಿದುದು ಮಾಮರದೊಳ್ ಬನದೊಳ್
ಪೊರಳ್ದು ಸಾ ।
ಯಲೆ ಪೊಲಗೆಟ್ಟು ಪೊಕ್ಕುದು ವಿಯೋಗಿಮೃಗಾವಳಿ ಕೊಲ್ವುದೆಂದು ಮು ॥
ನ್ನಲಿಯದೆ ಕೊಂಬುಗೊಂಡುಱಿದ ಕೋಗಿಲೆ ಕರ್ಬಿನ ಬಿಲ್ಗೆ ಕೂರ್ತುಕ ।
ರ್ಬಿಳ ಸನೆಗೊಬ್ಬಿನಿಂ ಕರೆವವೊಲ್ ಕರೆದತ್ತು ವಸಂತಮಾಸದೊಳ್ ॥೬೭॥

ಚಂಚುವಿಘಾತಜಾತವಿಳಸದ್ವಿವರಂ ಸಹಕಾರಕೋರಕಂ ।
ಬಂಚದ ಭಂಗಿಯೊಳ್ ಬೆರಸೆ ಸೂಸೆ ರಸಂ ಮೊಗವಿಟ್ಟು ರಾಗದಿಂ ।
ಪಂಚಮದಿಂಚರಂ ನಿಮಿರೆ ಪಂಚಸರಂ ಭಯದಿಂದೆ ಕೇಳ್ದು ರೋ ।
ಮಾಂಚಮನಾಂತು ಮೆಚ್ಚುತಿರೆ ಕೇಳಿಸಿದಂ ಕಳಕಂಠವಾಂಶಿಕಂ ॥೬೮॥

ತಳಿರಂ ತಾಳ್ದಿ ಬಱಿಲ್ದು ಪೊತ್ತು ನನೆಯಂ ಪೂಗೊಂಚಲಂ ಪೇಱಿ ಬ ।
ಳ್ಳಿಳಸಲ್ಲಾಡುವ ಭೃಂಗಕೋಕಿಳಶುಕವ್ರಾತಂಗಳಿಂ ಬಱಿಕ್ಕುವೀ ॥
ಸೆಳೆಗೊಂಬುಂ ಕೊನೆಗೊಂಬುಮೆಂತು ಫಳಭಾರಕ್ಕಾರ್ಪುನೆಂದಾಂತವೋ ।
ಲೆಳಮಾವಂ ಮುಳಯಾಸಿಳಂ ಬಳಸಿಕೊಂಡಿರ್ದತ್ತು ಚೈತ್ರಾದಿಯೊಳ್ ॥೬೯॥

ಗಿಳಿ ತಳಿರಂ ಮುದಂ ಮಗುೞ್ದಿ ಕೋಗಿಲೆ ಕೋರಕಮಂ ಮದಾಳಿ ಪೂ ।
ಗಳಸರೆಗರ್ಚಿ ಪಾಱಿದುವು ನೂತನಮಂ ನವವಸ್ತುಜಾತಮಂ ॥
ಬಳೆದೊಲವಿಂದವೋಲಗಿಸಿ ಬಂದ ಬಸಂತದ ಸೊಂಪನಱ್ತಿಯಿಂ ।
ತಳೆದಱಿಪಲ್ಕೆ ಪೋಪ ವನಪಾಲಕರಂತೆ ಮನೋಜರಾಜನಾ ॥೭೦॥

ನನೆಯ ಪುಣಂಬುಮಂ ಮುಗುಳನಿಟ್ಟೆಯುಮಂ ಮಱಿದುಂಬಿ–
ಪಾಯ್ದು ಪೂ ।
ವಿನ ಕವಲಂಬುಮಂ ತಿೞಡದ ಮುನ್ನಮೆ ಮನ್ಮಥನುರ್ಬಿ ಬಂದಮಾ ॥
ವಿನ ಮುಗುಳ್ವೆತ್ತ ಮಲ್ಲಿಗೆಯ ಪೂತದಿಮುರ್ಕತ್ತೆಯ ಕಂಪೆ ಕಂಪಮಂ ।
ಕೊಸರಿಸಿಕೊಂಡು ಕೂಗಿದುವು ತಾಗಿ ವಿಯೋಗಿಗಳಂ ವಸಂತದೊಳ್ ॥೭೧॥

ವಾಸಿಸಿತು ಘರ್ಮಗಂಡಜ ।
ಳಾಸವಮಂ ಸೇದೆವಟ್ಟವೋಲ್ ವನಿತಾಕ ॥
ರ್ಣಾಸಕ್ತ ಮಧುಪಕಬಳಿತ ।
ಕೇಸರಸುಕುಮಾರಶಿಖಿಶಿರೀಷಸ್ತಬಕಂ ॥೭೮॥

ಪಜ್ಜಳಿಸಿದಮೃತಜಳಧಿಯ ।
ಸಜ್ಜೆಗೆವಂದಿಂದುಲೇಖೆವೋಲ್ ಸುಲಲಿತಯೋ ॥
ಷಿಜ್ಜನತತಿ ಸಾಯಂತನ ।
ಮಜ್ಜನದಿಂ ವಿಮಳಮಳಯಜಸ್ಥಾಸಕದಿಂ ॥೭೯॥

ಮಲ್ಲಿಗೆ ಮುಗುಳಿಂ ತಳಿರಂ ।
ಮೆಲ್ಲಗೆ ಮುಸುಕಿದವೊಲಂಗನೆಯರಧರಲಸ ॥
ತ್ಪಲ್ಲವಮಂ ಸುಲಿಪಲ್ಲಿಂ ।
ದಲ್ಲುಗುವೆಳವೆಳಗಿನಿಂದದೇಂ ಮುಸುಕಿದರೋ ॥೮೦॥

ಬಗೆವುಗೆತೊಡೆದರ್ಕುಡಿಮಿಂ ।
ಜುಗಳಿಂ ನೀರಂಜಿಪಂತೆ ನೀರಜಮುಖಿಯರ್ ॥
ಮಿಗೆ ಕುಂಕುಮದಣ್ಪಿಂ ಸಂ ।
ಪಗೆವಣ್ಣಂ ಮುಗುಳ್ದ ಮೆಯ್ಗಳೊಳ್ ಮಳಯಜಮಂ ॥೮೧॥

ಅಲ್ಲಿಂ ಮುನ್ನಮೆ,
ನೂಂಕಿತರೆ ತೇರ ನೂಂಕುವ ।
ತೆಂಕಣೆಲರ್ ಬರ್ಪ್ಪಿನಂತೆ ಭಯಮುತ್ತವೊಲೇ ॥
ಣಾಂಕನೆಡದೊಲಗಿ ಬರುತಿರೆ ।
ಪಂಕಜಸಖನುತ್ತರಾಯಣಕ್ಕೇಱ್ತಂದಂ ॥೮೨॥

ಶರಮೊತ್ತಿ ಕುತ್ತೆ ಖರಕರ ।
ಕಿರಣಂಗಳ್ ಪೊಸೆಯೆ ಪುಟ್ಟಿದಗ್ನಿಕಣಂಗಳ್ ॥
ಕರಗಿಸಿದುವು ಪೊರೆಯೆತ್ತಿದು ।
ವುರುಪಿದುವರ್ಕಾಶ್ಮದಲ್ಲಿ ಪತ್ತಿದ ಹಿಮಮಂ ॥೮೩॥

ಪೂಗಣೆಗೆತ್ತಿದಂತೆ ಪೊಗರಂ ಪೊಸಗಾಡಿಗೆಗೂಡಿದಂತೆ ಚೆ ।
ಲ್ವಾಗಿ ವಿಲೋಚನಕ್ಕೆ ವಿರಹಾನಳನಿಂ ಮಸಿವಣ್ಣಮಾಗಿ ಬಂ ॥
ದೇಗಿ ವಿಯೋಗಿಚಿತ್ತತತಿ ಕಾಮಶರಾಂಘ್ರಿಯೊಳಗ್ಗಿದಂತೆ ಪಾ ।
ಯ್ದೇಗರಗಂಪನುಂಡುವೆಳಮಾವಿನ ಪೂವಿನೊಳುನ್ಮದಾಳಿಗಳ್ ॥೭೨॥

ತಾವರೆ ನೂಂಕುವಂತೆ ಮಧುಬಿಂದುವನಂದು ವಿಳಾಸವಾರ್ಧಿಯೊಳ್ ।
ಸೀವರಮೆತ್ತುವಂತೆ ತೆರೆಗಳ್ ಮೊದಲೊಳ್ ಮುಗುಳೊತ್ತುವಂತೆ ಶಾ ॥
ಖಾವಳಿ ಕಾಮಿನೀಜನದ ವಕ್ತ್ರವಳಿತ್ರಯಬಾಹುಮೂಲದೊಳ್ ।
ತೀವಿ ಮಡಲ್ತು ಮೂಡಿದುವು ಮಂಜರಿಗಳ್ ನವಘರ್ಮಬಿಂದುವಾ ॥೭೩॥

ಮುನ್ನಮೆ ಬೆಮರ್ತುಮುತ್ತಿನ ।
ಕನ್ನಡಿವೋಲ್ ತೊಳಪ ತರುಣಿಯರ ವದನಂಗಳ್ ॥
ಮನ್ನಿಸದೆ ಸೆಳೆದುಕೊಂಡುವು ।
ಚೆನ್ನಂ ರೋಹಿಣಿಯಸಪ್ಪಿದಮೃತದ್ಯುತಿಯಾ ॥೭೪॥

ಎಲೆಯಿಕ್ಕಿದಂತೆ ಪೊರೆವಿಡೆ ।
ಸುಲಿದೆಲೆಗರ್ಪಲ್ಲಿ ಪಲ್ಲವಂ ಪುಟ್ಟಿದವೋಲ್ ॥
ಜಲಜಲನೆ ಕೆಂಪನುಗುಳ್ದುವು ।
ಲಲಿತಲತಾಂಗಿಯರ ಪಳಚನೆಸೆವಧರಂಗಳ್ ೭೫॥

ಪಳಚದೆ ಪೊಳೆವೆಳವೆಂಡಿರ ।
ಬಿಳಿಯಲರ್ಗಣ್ಣವರ ಚೆಲ್ವನೆಳಕುಟಿಗೊಂಡಂ ॥
ತಳ್ತರ್ದು ತೊಳಗಿದುವು ಕುಮುದಂ ।
ಗಳ ಸಿರಿಯೋಸರಿಸಿದತ್ತು ಶಿಶಿರಾತ್ಯಯದೊಳ್ ೭೬॥

ಅವತರಿಸಿ ತಾಮ್ರಮಂಜರಿ
ಕಿವಿಯಂ ತೀವುತ್ತೆ ಪರ್ಚುವಂತಳಿಗಣಿಕಾ ॥
ರವಮನದೇಂ ತಳೆದುದೊ ಕೇ ।
ಳ್ವವೊಲಬಲಾಜನದ ಮಾನಮದಮಂ ಮಧುವೊಳ್ ॥೭೭॥

ಮಿೞಾಂಗಳ್ ಮಿಗೆ ಮೋಕ್ಷಸ್ನಾ ।
ಸಂಗುಡುವ ಪೊಲೊಡನೆ ಮುೞುಗೆ ತಾನುಗುೞ್ದುದು ಮಂ ॥
ಸುಂಗಿದ ದಿನಕರನಂ ಮಿಗೆ ।
ಪಿಂಗುತ್ತುಂ ರಾತ್ರಿರಾಹು ಶಿಶಿರಾತ್ಯಯದೊಳ್ ॥೭೪॥

ಭರವಸದೆ ಕವಿವ ಖರಕರ ।
ಕಿರಂಣಂಗಳ್ಗಳ್ಕಿ ಪುಲ್ಗಳಂ ಕರ್ಚಿದವೋ ॥
ಲರುಣಿತತುಷಾರ ಜಳಶೀ ।
ಕರಮೆನೆ ಪನಿ ಪುಲ್ಲ ಪನಿಗಳಲುಗಿದುವೆಲರಿಂ ॥೭೫॥

ಸೊಪ್ಪು ಸೊವಡಾಗದೆಸಱೆಸ ।
ಱ್ದಿಪ್ಪದೆ ಮೊಗಮಿರಿದು ಕಾರ್ದು ಚಪ್ಪಲರ್ದಿನೆಗಂ ॥
ಸಿಪ್ಪಿಟ್ಟು ಕರೆದು ಕೊಂಡುವು ।
ಸಪ್ಪದ ಮುಪ್ಪುಳದಿನೊಱೆವ ನಱುವಂಡುಗಳಂ ॥೭೬॥

ಶ್ರೀ ಪದ್ಮದೊಳೊದವೆ ಮನ ।
ಸ್ತಾಪಂ ಪುಟ್ಟಿದುದೊ ತಮಗೆ ರುಜೆಯಾಯ್ತೊದಿವಾ ॥
ಸ್ವಾಪದಿನೆನೆ ನಯು ಮುಱಿದವೊ ।
ಲೊಪ್ಪಿದುವು ಮಧು ಪ್ರವೇಶದೊಳ್ ಕುಮುದಂಗಳ್ ॥೭೭॥

ಪೊಸೆಯಿಸಿ ನಸುಮಿಸುಪೇಱಿದ ।
ಬಿಸಿಲಿೞಿಯೆ ಬೆಮರ್ತು ಬಿಂದು ಬಿಡುವವೊಲೆನಸುಂ ॥
ಪೊಸ ಮುಗುಳಂ ಪೊತ್ತೆಸೆದುದು ।
ವಸಂತದೂತಿಕೆ ವಸಂತಮಾಸದ ಮೊದಲೊಳ್ ॥೭೮॥

ಅಂತುಮಲ್ಲದೆ,

ನೀರಸ ಮಾದೆಲೆಯುಂ ಸಲೆ ।
ಸ್ವೈರಿಸದಿವೆ ಸೂಂಕಿ ಕಳೆದುವೆನೆ ಕಳಿಕೆಗಳುಂ ॥
ಕೋರಕದ ತುಱುಗಲುಂ ಸಹ ।
ಕಾರದ ಕೊಂಬುಗಳೊಳೊಡೆದುದೇಂ ಮೂಡಿದುವೋ ॥೭೯॥

ಸಳಸಳಿಸಿ ಮೊಗಸಿ ಪೊರೆವಿಡು ।
ವೆಳಗೆಂಪಂ ತಳೆದ ಪಸುರನಾಳ್ದಂಕುರದಿಂ ॥
ದೆಳದಳಿರಂ ನಿಱಿದಳಿರಂ ।
ಸೆಳಗೊಂಬುಗಳೊಱಿಗೆ ತುಱುಗಿ ಬಂದುದು ಚೂತಂ ॥೯೦॥

ಅಸಿಯ ಬೆರಲ್ಗೊನೆ ಕೊಂಬಿಂ ।
ಪೊಸದಳಿರೆನೆ ಚೂತಲತಿಕೆಯೆಳದಳಿರ್ದಳದೊಳ್ ॥
ಮಿಸುಪಲರ ಗೊಂಚಲೊಳ್ ಕ ।
ಣ್ಗೆಸೆದಿರ್ದುವು ಕಾಮಚಾಪುರಗ್ರಾಹಿಣಿವೋಲ್ ॥೯೧॥

ಕೊನರಾಱಿತೆ ಪೊತ್ತೆ ಕಿಱಿತ್ಗೊಂ ।
ಬಿನೊಳನಿಲನಿಸೊಲೆದ ಕೊಂಬುಗೆಯ್ಯಿಂ ಪೊಸಪೂ ॥
ವಿನ ಪುಡಿಯನೊಟ್ಟಿಕೊಂಡ।
ತ್ತನಂಗ ಕರಿಧೂಳಿ ಮದಕೆ ಬಂದವೊಲಾಮ್ರಂ ॥೯೨॥

ಅಳಿ ಬಳಸೆ ಸೊನೆಯ ಕಂಪಂ ।
ಬಳೆದೊಟ್ಟವೊಲೆಸೆವ ತಳಿರ ಶಾಖಾಭುಜದೊ॥
ಳ್ದಳಿರೊಳ್ ಗಳಪುವ ಗಿಳಿಯಿಂ ।
ಗಿಳಿಯೋದಿಸುವಂತೆ ಚೂತಲತೆ ಕರಮೆಸೆಗುಂ ೯೩॥

ಮಾವಿನ ಸೆಳೆಗೊಂಬುಗಳೊಳ್ ।
ಪೂವಿನ ಗೊಂಚಲ್ಗಳೆಸೆದುವಳಿಗಳ ಬಳಸಿಂ ॥
ಭಾವಿಸಿ ಮಧುಮಲರ್ಗಣೆಯಿಂ ।
ತೀವಿದ ತೂಣೀರದಂತೆ ಪುಷ್ಪಾಯುಧನಾ ॥೯೪॥

ಅಲರ್ಗೊಂಚಲೊಂದು ಪಕ್ಕದೊ ।
ಳಳಿವೆರಸಿರೆ ಕಳಿಕೆಯೊಂದು ಪಕ್ಕದೊಳಿರೆ ತ-॥
ಳ್ತಳಿರುಪಸೆಗೊಂಬುಮಿಸುಕಿದು ।
ವಲರ್ಗಣೆಯಂ ಗುಱಿಯನಿಟ್ಟವೋಲ್ ತೋಮರದಿಂ ॥೯೫॥

ಪರಿ ಚುಂಬಿಸಿ ನವಕಳಿಕಾ ।
ಧರರಸಮಂ ಪೀಱಿತೆ ಪರಭೃತಂ ಚೂತಲತಾ ॥
ತರುಣಿಗೆಸೆದತ್ತು ಶಾಖಾ ।
ಕರ ಕಂಪಂ ತನ್ನಿನಾದ ನಿಭಸೀತ್ಕಾರಂ ॥೯೬॥

ಚಳಶಾಖಾದಳಹತಿಕರ ।
ತಳ ತಾಳ ಮನಿಱಿತೆಸೆ ಏರುವದಳಿಕುಳವಳಯಾ ॥
ಕುಳ ಕೋಕಿಳ ಕಳರವದಿಂ ।
ಗಿಳಿ ಸೋವಬಲೆಯುವೊಲಾಮ್ರಲತೆ ಕರವೆಸೆಗುಂ ॥೯೭॥

ಒಡೆದಲರ ಸಡುವೆ ಮಿಡಿ ಪೊಱ ।
ಮಡೆ ಸಿಡಿಮಿಡಿಗೊಂಡು ಪಸಿದು ಪೊಸಬಂಡನುಣಲ್ ॥
ಪಡೆಯದೆ ಸವಿಗಂಡುದು ಮಾ ।
ಮಿಡಿಯಂ ಕಡಿದೊಸರ್ವ ಸುರಭಿರಸಮಂ ಭೃಂಗಂ ॥೯೮॥

ಮಿಡುಕುವ ವಿಯೋಗಿಯೆರ್ದೆಯುಂ ।
ನಡೆಗೊಂಡಲರ್ಗಣೆಗಳಲಸಿ ಬಲ್ಮಿಟ್ಟಿಗಳಂ ॥
ಪಡೆದು ಕಿಡುವಂತೆ ಕಂತುಗೆ ।
ಪಡೆದುವು ಮಿಡಿಯಂ ಮಡಲ್ತ ಮಾವಿನ ಪೂಗಳ್ ॥೯೯॥

ತರಳ ಜಳಬಿಂದು ಸಿಂಪಿನ ।
ಪೊರೆಯೊಳ್ ಮುತ್ತಾದುದರ್ಕೆ ಬಿರಿ ಮುಗುಳಿಂದು ॥
ಬ್ಬರಿಪ ಮಧು ಬಿಂದು ಪಚ್ಚೆಯ
ಪರಲಾಯ್ತೆನೆ ಮಿಡಿಗಳೊಗೆದುವಿಮ್ಮಾವುಗಳೊಳ್ ॥೧೦೦॥

ಬಿರಯಿಯೆರ್ದೆ ಬಿರಿಯೆ ಭರದಿಂ ।
ಬಿರಿ ಮುಗುಳಿಂದೆಚ್ಚು ಕೂಗಿ ಬಾಗುವಿಸಂ ಮಾ ॥
ಮರದೊಳ್ ಮಿಡಿಯುಬ್ಬರಿಸಿರೆ ।
ಬಿರಲಂ ಮಿಡಿದವರ ಮಿಟ್ಟಿದೊಟ್ಟಂ ಮದನಂ ॥೧೦೧॥

ಅಲರ್ವೆರಸಲುಗುವ ತಳಿರೊಳ್ ।
ಕಲಸಿದ ಮಾಂಗಾಯ್ಗೆ ಪಾಯ್ದು ಮಧುಮಾಸದೊಳ ॥
ಗ್ಗಲಿಸಿದ ನಲವಿಂ ತಳಿರು ।
ಯ್ಯಾಲಾಡಿದುವು ಗಿಳಿಯ ಮಱಿಯುಮೆಳಗೋಗಿಲೆಯುಂ ॥೧೦೨॥

ಪಸರಿಸು ಚೂತ ಕಟ್ಟು ಗುಡಿಯಂ ಪೊಸಮಲ್ಲಿಗೆಗಾಯ್ತು ನೂತನ ।
ಪ್ರಸವ ವಿಭೂತಿ ನಿನ್ನರಸಿಗೆಂದೆಡೆವೇಱಿವೊಲತ್ತಣಿಂದೆ ಬಂ ॥
ದೊಸೆದಳಿಕಾಂತೆಯೇಂ ಸೆಳೆದುದೊಂದೆ ನವೀನದಳೋತ್ತರೀಯಮಂ
ಪೊಸೆಯಿಸಿ ಸೂಱೆಗೊಂಡುದಲರ್ಗೆಂಪುಗಳಂ ಸಹಕಾರ ಕಾಂತನಾ ॥೧೦೩॥

ಪಿರಿದುಮನಂಗನಾವ ಸಿರಿ ತಮ್ಮನೆ ಕೂರ್ಗಣೆ ಮಾಡಿ ನಲ್ಲರಂ ।
ಬಿರಯಿಗಳಂ ಮನಂಬಿರಿಯೆ ತಾಗಿ ಕರಂ ಬಿರಿವಂತೆ ಬೇಗದಿಂ ॥
ಬಿರಯಿಯ ಚಿತ್ತಮಂ ಪಿರಿದು ನುಂಗಲೆ ಬಾಯ್ದೆಱೆವಂದದಿಂದದೇಂ ।
ಬಿರಿದುವೊ ತೋರಮಲ್ಲಿಗೆಗಳಬ್ಬರಮಾಗಿ ಬಸಂತಮಾಸದೊಳ್ ॥೧೦೪॥

ಪಸುರೊಳಸೋಱೆ ಬೆಳ್ಪು ಬಳೆಯುತ್ತಿರೆ ತೆಂಕಣಗಾಳಿಯಿಂ ಸಡಿ ।
ಲ್ವಸು ಪೊರೆಯಾಗೆ ಸಂಜನಿತಕಾಮ ಶಿಲೀಮುಖಪಾತದಿಂ ರಸಂ ॥
ಪೊಸತು ಪೊದಱ್ದು ಪೊಣ್ಮೆ ವಿರಹಾತುರೆಯಂತೆ ವೊಲೇಂ ಸುಗಂಧನಿ ।
ಶ್ವಸಿತಮನೆತ್ತಿತೋ ಬಿರಿದ ಮಲ್ಲಿಗೆ ಬಂದ ಬಸಂತ ಮಾಸದೊಳ್ ॥೧೦೫॥

ಎತ್ತಿದ ಮುರಜಮನೆಳಮಾ ।
ವೆತ್ತಿದವೋಲ್ ತಳಿರ ಪುದುವಿನೊಳ್ ಮಧುವಿಸರಂ ॥
ಮುತ್ತೆನಿಸಿರೆ ಬೆಳ್ದಿಂಗಳ ।
ಬಿತ್ತಂ ಕಟ್ಟಿದವೊಲಿಡಿದ ಮಲ್ಲಿಗೆಮುಗುಳ್ಗಳ್ ॥೧೦೬॥

ಎಳವೆಂಡಿರ ಕಡೆಗಣ್ಗಳ ।
ಬೆಳಗಂ ಸ್ಮರನುರುಳಿಗೆಯ್ದೊಡವು ಚಪಳತೆಯಿಂ ॥
ಕಳಕಳಿಸಿ ನಗುವವೋಲಳಿ ।
ಗಳ ರುತಿವೆರಸಿರ್ದುವಲರ್ದ ಪೊಸಮಲ್ಲಿಗೆಗಳ್ ॥೧೦೭॥

ಬಿರಯಿಗೆ ತೆಗೆಬಗೆ ಕಂಪುಗೆ ।
ಬಿರಿದುದು ಮಲ್ಲಿಗೆ ಪುರಲ್ದು ಪುಗೆ ಮಧುಮಾಸಂ ॥
ಕುರುಳ ಮುಗುಳ್ನಗೆ ಕಂಪಿನ ।
ಕರಡಿಗೆ ವನಸಿರಿಗೆ ಸರಿಗೆ ಬಗರಗೆ ಮಧುವಾ ॥೧೦೮॥

ಬಸನಿಗೆಯುರೊಸಗೆ ಮುತ್ತಿನ ।
ಹಸಿತಂ ಬೆಳ್ವೆಳಗಿನುರುಳಿ ಬೆಳ್ದಿಂಗಳ ಬೆ ॥
ಳ್ಪಸದನಮೆನಲೇಂ ಬಿರಿದುದೊ ।
ಪೊಸಮಲ್ಲಿಗೆ ಜಡಸ ಬಿಬ್ಬಿತ್ತು ಕುಸುಮಾಯುಧನಾ ॥೧೦೯॥

ಮಲ್ಲಿಗೆಯುನೊಲಿಸುವಳಿಪಿಂ ।
ಮೆಲ್ಲನೆ ಪೂವಾದುದೆನಿಸಿ ಮಾವಿನ ಕೊನರಿಂ ॥
ದಲ್ಲುಗುವ ಸೊನೆಯಿನೇಂ ಕಂ ।
ಕೆಲ್ಲಿ ಕರಂ ನಾಂದು ಸಗೆದು ಮಗಮಗಿಸಿದುದೊ ॥೧೧೦॥

ಫುಲ್ಲಶರಶಿಖಿಯ ಪೊಗೆಯೆನೆ ।
ಪಲ್ಲವಿಸಿದಶೋಕೆಯಿಂದೆ ಮಿಗೆ ಬಂದಳಿಗಳ್ ॥
ಮಲ್ಲಿಗೆಯುಲರ್ಗಣ್ಗಳಿನಲ ।
ರಲ್ಲೊಕ್ಕುವು ಬಾಷ್ಪಬಿಂದುವೆನೆ ನವಮಧುಗಳ್ ॥೧೧೧॥

ಆನೆ ಮದನಂಗೆ ಪೊಸಮದ ।
ದಾನೆ ಜಗದ್ವಿಜಯಿಗೆಂದು ಮುಡಿಗಿಕ್ಕುವವೋ ॥
ಲೇನಿಕ್ಕಿದುದೊ ವಸಂತಾ ।
ಸ್ಥಾಸಿಕೆಯೊಳ್ ಪಾಟಳದ್ರು ಜಠರಚ್ಛದಮಂ ॥೧೧೨॥

ಬರುತುಮೆ ಬಸಂತಕಾಂತಂ ।
ಬರಸೆಳೆಯೆ ಸಡಿಲ್ದವೋಲ್ ಜರಚ್ಛದನಂ ಬೀ ॥
ಱ್ತರೆ ತನ್ನಯ ಮೆಯ್ಯಿಂ ಪಾ ।
ದರಿ ಪೊಸೆಯಿಸಿತೊಡನೆ ಕುಸುಮುಗುಚ್ಛೋತ್ಕರದಿಂ ॥೧೧೩॥

ಪಾದರಿಗೆ ಪುಷ್ಪವತಿಗೊಳ ।
ಗಾದುದುಮಲ್ಲದೆ ಮುಗುಳ್ದು ಚಂಡಾಳಿಕೆಯೊಳ್ ॥
ಪೋದ ಪೊಲೆಗಲಸಿದಂತಿರೆ ।
ನಾಸ್ಪುದು ಸಂಪಗೆ ಸುಗಂಧದಿಂ ಮಧುಕರಸಂ ।೧೧೪॥

ರತಿಯು ಬಱಿಲ್ಮುಡಿಗಾಕೆಯು ।
ಪತಿಯು ತುಱುಂಬಿಂಗೆ ಮಧುವೆ ಎೞಸಲ್ಗಱಿದಂ ॥
ಚತುರತೆಯಿನಲ್ಲದಂದಳಿ ।
ವಿತತಿಗಳೇಕೆಱಿಗವಲರ್ದ ಸವಚಂಪಕದೊಳ್ ॥೧೧೫॥

ತೋರಿದುವಾದ ಮಲ್ಲಿಗೆಯ ಮೊಗ್ಗೆಗಳೊಳ್ ಮೊಗವೂಱಿ ಬಿದುರ್ಗಭೋ ।
ಭೋರ್ಗರೆನೆ ಪಾಯ್ದು ಬಂಡಿನೊಳೆ ಬೆಂಡೊಗೆದೊಯ್ಯನೆ ತೆಂಬೆಲರ್ ತೆಱಿಂ ॥
ದೀರಿದುವಾದೆಱಿಂಕೆಗಳನೆತ್ತಿ ಮುಗುಳ್ತಿರೆ ಬೀಸಿಕೊಂಡೆಲ ।
ಗೀರ್ಗರನೆರಲ್ದು ಕಾಱಿ ಕಡಲಿಟ್ಟುವು ಮತ್ತಮಧು ವ್ರತಾದಿ ಗಳ್ ॥೧೧೬॥

ಆಸವ ಮುಂಡು ಮೆಯ್ಮಱೆದ ನಂದನಲಕ್ಷ್ಮಿಯ ವಕ್ತ್ರಮುಕ್ತನಿ।
ಶ್ವಾಸಮೆನಿಪ್ಪ ತೆಂಕಣೆಲರೆತ್ತುವ ತನ್ನ ವಿಭಿನ್ನಕುಟ್ಮಳಾ ॥
ಗ್ರಾಸವಗಂಧದಿಂ ಕಳಿಯೆ ಸೊರ್ಕಿಸಿತೀಜಗಮಂ ಸುಗಂಧನಿ ।
ಶ್ವಾಸಿತಕೌಸುಮಾಸವಕುಳಂ ವಕುಳಂ ಮುಕುಳಂ ವಸಂತದೊಳ್ ॥೧೧೭॥

ಪುದಿದ ಪರಾಗಮಂ ಪರಪಿಯುಂ ಪೊರೆಯೆತ್ತಿಯುಮೊತ್ತಿ ಪೊನ್ನ ಬ ।
ಣ್ಣದ ನವಕರ್ಣಿಕಾರ ಕುಸುಮಕ್ಕೆಱಿಗಿರ್ದ ಮದಾಳಿ ಕಂಪುಗಾ ॥
ಣದೆ ಕಳಿದತ್ತು ಪೆಣ್ಣ ಪೊಸ ರೂಪಿನ ಪಾಪೆಗೆ ಪಾಸಿ ಬಿರ್ದ ಬ ।
ಱಿಯ್ದದವಿಸಿದಿಂಪುಗಾಣದಱಿಲಿಂ ಪೆಱಿಪಿಂಗುವ ಕೇಳನಂದದಿಂ ॥೧೧೮॥

ಎಂಬ ಪೊಗೞ್ತೆಗೞುಂಬಮಾಗಿ

ವಿಕಸತ್ಪುಷ್ಪಾಟ್ಟಹಾಸಂ ಸ್ಮಿತಕುಸುಮರಜೋಭಸ್ಮ ವಿಭ್ರಾಜಿ ಮಾದ್ಯ।
ತ್ಪಿಕನಾದಂ ಭೃಂಗಸಿದ್ಧಾಂಜನರಸಘಟಿಕಂ ಪಲ್ಲವೋದ್ಯಜ್ಜಟಂ ಕೆ॥
ಯ್ಯಕಪಾಲಂ ಚಂದ್ರಬಿಂಬಂ ತನಗೆನೊ ಜಗತೀಚಕ್ರಮುಂ ಚೈತ್ರಕಾಪಾ।
ಲಿಕನೆಂಬಂ ಬಂದದೇಂ ಮೋಹಿಸಿದನೊ ಮಧುಬಿಂದೂದ್ವಮದ್ಗಂಧವಾಹಂ॥

ಅಂತು ಮದನದಹನಕ್ಕುದ್ದೀಪನಮಾಗಿ ಬಂದ ಬಸಂತದೊಳ್ ಕೋ।
ಗಿಲೆಯ ಸರಮುಂ ಕೇಳಲಾಱದಂತೆ ಪೂವಿನಕಂಪಂ ಕೊಳಲ್ ತಳೆಯದಂತೆ
ಸುರಭಿಪವನನ ಸೋಂಕಂ ಸೈರಿಸದಂತೆ ಬಂದ ಬಸಂತನ ಬನಮುಂ ನೋಡ
ಲಂಜಿದಂತೆ ಮಾನಸವಮುದನಂ ಮದನ ಮೂರ್ಚ್ಛಾಪರವಶತೆಯಿಂ ಪಗಲು
ಮಿರುಳುಂ ಕಱಿಯುತ್ತುಮಿರೆ,

ಅತ್ತಲಸವಸದೆ ವಾಸವ।
ದತ್ತೆ ಗುಣಪ್ರಿಯನ ರೂಪನಿರುಳುಂ ಪಗಲುಂ॥
ಚಿತ್ತದೊಳೆ ಬಗೆದು ಭಾವಿಸಿ।
ಚಿತ್ತಜತಾಪದೊಳೆ ತರುಣಿ ಕಡುಬಡವಾದಳ್ ॥೧೧೯॥

ಅವಗಳಿಯವಾದ ವಿರಹದೊ।
ಳವರ್ಗಳ ಪಸೆಗಳೊಳೆ ಪೊರಟ್ವಳಟ್ವಿಳ್ ಭಾವೋ॥
ದ್ಭವ ನಡೆಯುಡುಗದೆ ಕಾಯ್ದುಸಿ।
ತವದಂಬುಗುಡಾಗಿ ಬಿರ್ದವೋಲ್ ಬಸವೞಿದಳ್ ॥೧೨೦॥

ನಾಟುವ ನನೆಗಣೆ ಚಿತ್ತಮ॥
ನಾಟವಿಟಂಬರಿಸಿ ನೆನೆಹದಿಂ ಪೊಸವೇಟಂ॥
ಕೋಟಿ ತೆಱನಾಗೆ ಕಾಮಿನಿ।
ಬೇಟದ ಕತೆಗಳನೆ ಕೇಳಲೞ್ತೆಗೆಯಾದಳ್ ॥೧೨೧॥

ಅಗಿವೆರ್ದೆಯೊಳಿಡಿದ ನನೆಯುಂ।
ಬುಗಳಿಡಿದ ವೊಲುಗಿದು ಬಗೆದು ಬಗೆಯದೆ ಬಿಸುಪಂ॥
ಮೊಗಸೆ ಮಱದುಂಬಿ ಮಿಗೆ ಕ।
ಮ್ಮಗೆ ಸುಯ್ಗಳ ಕುಡಿ ನಿಮಿರ್ಕೆಗೊಂಡುವು ವಧುವಾ ॥೧೨೨॥

ಕಾಮನೆ ಕೃತಾಂತನೊಪ್ಪುವ ।
ಕೌಮುದಿಯೆ ಕಸಲ್ಪ ಬಿಸುವಿಸಲ್ ನಿದ್ರೆಯು ಚಿಂ ॥
ತಾಮಣಿ ಚಿಂತೆಯೆ ಸಖಿಯಾ ।
ಯ್ತಾಮಹಿಳೆಗೆ ಮನದೊಳಾಗೆ ಮಾನವಮದನಂ ॥೧೨೩॥

ಅಸಿಯುಳ ಸಣ್ಣನಪ್ಪ ನಡುವೊಪ್ಪುವಿನಂ ವಿಂಗೆ ಸಣ್ಣವಾಗೆ ಬೆ ।
ಳ್ಪಸೆಯೆ ಮುಖೇಂದು ಮಂಡಳಕೆ ಮೆಯ್ ಮುಖಿಗುತ್ತಿರೆ ಚಿತ್ತಜಾಗ್ನಿದ ॥
ಳ್ಪಸೆ ಬಲಿದಂತೆ ಕರ್ಕಶಕುಚಂ ಬಡವಾಗದೆ ತಾನೆ ತೋರೆ ಬೇ ।
ಲಿಸದಳವಾಯ್ತು ಚೆಲ್ವು ಕಮಳಾಸ್ಯೆಗೆ ಕಾಮಕಳಾವ
ತಾರದೊಳ್ ॥೧೨೪॥

ಪೊಸತಳಿರಿಂದೆ ಬೀಸಿ ಕಳೆದಂತಿರೆ ಕಾಂತೆಯ ಕಾಯಕಾಂತಿಯುಂ ।
ಬಿಸುಡೆ ಪಸುರ್ಪುಸೂಸಿ ಮಳಯೋದ್ಭವಮುಂ ಸಲೆ ಪೂವಿನೊಳ್ ಪೊರ ॥
ಳ್ದಸದಳಮಾಗೆ ಮಾಡಿದವೊಲುಜ್ವಳ ಮಪ್ಪೆಳವೆಳ್ಪುಪೊರ್ದೆ ಮೆ ।
ಯ್ಮಸೆದಸಮಾಸ್ತ್ರನೊಪ್ಪುವಸಿಯಂತಸಿಯಾದುದನಂಗ
ತಾಪದಿಂ ॥೧೨೫॥

ಕದಪಿನೊಳಿಟ್ಟ ಕೆಯ್ಯ ಪೊಸಪಜ್ಜೆಯನಂಗನ ಪೊಯ್ದ ಬಾಸುಳಿಂ ।
ದದಿನಿರೆ ಪೂವಿನೊಳ್ ಪೊರಳೆ ಪತ್ತಿದ ಪೂಗಳೆ ಕೊಂಡ ಕಾಮ ಬಾ ॥
ಣದ ದೊರೆಯಾಗೆ ಮೆಯ್ಯ ಮಳಯೋದ್ಭವದಣ್ಪುಗಳೇಱಬಾಯೊಳಿ ।
ಕ್ಕಿದ ಕವಳಂಬೊಲಾಗೆ ಲಲಿತಾಂಗಿ ಬಟಿಲ್ವಳನಂಗತಾಪದಿಂ ॥೧೨೬॥

ಹಾರವೆ ಭೂಷಣಂ ಮಳಯಜಾತವೆ ಮೆಯ್ಗೆ ಸೆವಣ್ಪು ಸಾರಕ ।
ರ್ಪೂರವೆ ತಂಬುಲಂ ತಳಿರ ಜೊಂಪವೆ ಬಾಳ್ವಿನೆ ಕಲ್ಪನಾಮೃತಾ ॥
ಹಾರವೆ ಜೀವನಂ ಸಲಿಲಕೇಳಿಯೆ ಕೇಳಿ ನವಪ್ರವಾಳ ಸಂ ।
ಸ್ತಾರವೆ ಸಜ್ಜೆಯಾಯ್ತು ತರಳಾಕ್ಷಿಗೆ ತದ್ವಿರಹಾತಿರೇಕದೊಳ್ ॥೧೨೭॥

ಸಕೃದಾಯಾತಾರ್ಧ ನಿದ್ರಂ ಕ್ಷಣ ಮುಕುಳಿತನೇತ್ರೋತ್ಪಳಂ
ನಿರ್ನಿಮೇಷಾ ।
ಧಿಕಶೂನ್ಯಾಳೋಕಮು ಪ್ರಸ್ತುತ ಪರಿಮಿತವಾಚಂ
ವೃಥೋತ್ಥಾನಯಾನೋ ॥
ತ್ಸುಕಚಿತ್ತಂ ಮೂಕವೀಣಾ ಪ್ರಯುತದರಶಿರಃ ಕಂಪನಂ ದೂರ ವಿಚ್ಛಿ– ।
ನ್ನಕಥಾ ಹೂಂಕಾರ ಮೇಂಶೋಭಿಸಿದುದೊತರುಣೀ
ಚೇಷ್ಟಿತಂ ಮೋಹಮುಗ್ಧಂ ॥೧೨೮॥

ಬಿಸುಸುಯ್ ಮೆಯ್ವೆರ್ಚೆಯುಂ ಕಂದಿರದಧರಲ ಸತ್ಪಲ್ಲವಂ ಕಾಯ್ದು ಕಣ್ಣೀ ।
ರೆಸಱಿೊಳ್ತುಱ್ಕಿಡೆಯುಂ ಬಾಡದ ಸಯನಯುಗೇಂದೀವರಂ
ಚಿತ್ತಜಾಗ್ನಿ ॥
ಪ್ರಸರಂತಳ್ತಿಬಿಳ್ವಿಯುಂಸೀಯದ ಗುರುಕುಚಕೋಕದ್ವಯಂ
ಶೋಭಿಕುಂಸೂ ।
ಚಿಸುವಂತಾ ಕಾಮಿನೀ ದುರ್ಧರ ವಿರಹತಪಃ ಪ್ರೌಢ ಸಾಮರ್ಥ್ಯ
ದುರ್ಬಂ ॥೧೨೯॥

ಮೊಲೆಗಳೊಳಿಕ್ಕಲಬ್ಜದ ವಿಶಾಳದಳಂಗಳನಾಳ್ದು ನೀಳ್ದಕ–।
ಣ್ಮಲರ್ಗಳೊಳೊತ್ತಲುತ್ಪಳದ ನಿಟ್ಟಿಸಱಿಂ ಕುಚಕುಂಭ ಮಧ್ಯದೊಳ್ ॥
ಸಲಿಸಲೆ ಶಂಕೆಯಿಂದಸಿಯ ಬಾಳಮೃಣಾಳಮನಾವದೀರ್ಘಿಕಾ॥
ಜಲದೊಳಮೆಯ್ದೆ ಪೊಕ್ಕಲಸಿಕಾಣದೆ ಕಾಯ್ದುದು ತತ್ಸಖೀಜನಂ ॥೧೩೦॥

ನೀರೂಡುವಂತೆ ಮದನನ ।
ಕೂರಸಿಯುಂ ಚುಯ್ಯೆನುತ್ತೆ ಪೊಗೆಪಾಯ್ವ್ವ ನೆಗಂ ॥
ನೀರೇಜವನದೊಳದುರ್ವ ।
ನೋರಂತಿರೆ ವಿರಹದಹನದಗ್ಧೆಯುರವಳಂ ॥೧೩೧॥

ಸವಸಂ ಸವಸಂ ಕೃತಕಂ ।
ಜವನಂ ಜವನಂತೆ ವನಿತೆಗಾಯ್ತು ಕೊಲಲ್ಬ ।
ರ್ಪವನಂ ಪವನಂ ಪೋಲ್ತುದು ।
ದವನಂ ದವನಂತೆ ವಿಷಮುಮಾಯ್ತನವರತಂ ॥೧೩೨॥

ಸುರಿವುವು ಕಣ್ಬನಿಗಳ್ ಪುಗೆ
ಪರಮಾಣುವಿಸನಿತು ರಜಮುಮುವಳಲ್ರುಜಳಂ॥
ಸುರಿವುದು ಚಿತ್ರವೆ ಸುೞಿಯು ॥
ತ್ತಿರೆ ಪೊಕ್ಕಭಿಮಾನ ಮಂದರಂ ಕಣ್ಬೊಣರೊಳ್ ॥೧೩೩॥

ಅಂತಳವಿಗೞಿದ ಲೀಲಾವತಿಯ ವಿರಹಮುಮನಸಕಳಿದ ವಸಂತ ಸಮಯುಮುಮಂ ಕಂಡು ಕಾಳೋರಗಂ ಕೊಂಡವರ್ಗೆ ನಂಜಿನ ಮುೞಿ ಕೊಂಡಂತಾದುದೆಂದು ಭಯಂಗೊಂಡು ವಾಸವದತ್ತೆಯುಸೞಿಯಲೀಯದೆ ಕಳಾವತಿಯೇಕಾಂತದೊಳ್ ಪೇೞ್ವುದುಮಂತೆ ಗೆಯ್ವೆನೆಂದು ವನವನಂದ ಪ್ಪದೆ ಚೂತಪ್ರಿಯಂ ಮೊದಲಾಗಿ ಗಿಳಿಗಳುಮಂ ಚೂತಪ್ರಿಯೆ ಮೊದಲಾದ ತುಂಬಿಗಳುಮಂ ವನವಿಪಂಚಿ ಮೊದಲಾದ ಕೋಗಿಲೆಗಳುಮಂ ಆಗಳೆ ಕರೆದು ಕಳಿಪಿ,

ಅಱಗಿಳಿ ಕರ್ಚಿಪಾೞಿದೊಡೆ ಕೆಂದಳಿರಂ ಮುೞಿದುಂಬಿ ಪೂವಿನೊಳ್ ।
ಪೊರೆದೊಡೆ ಕೋಕಿಳಂ ಕಳಿಕೆಗರ್ಚಿ ಕಳಸ್ವನದಿಂದ ಮೊರ್ವೆಯುಂ ॥
ಕರೆದೊಡೆ ತೞ್ತು ಬಂದ ತಳಿರುಯ್ಯಲನೇಱಿ ವಸಂತರಾಗದಿಂ
ತರುಣಿಯುರಾಡಿ ಪಾಡಿದೊಡೆ ಪೂಸಿದೊಡಂ ಹರಿಚಂದನಂಗಳಂ ॥೧೩೪॥

ಪೂವಿನ ಕಂಪನೆತ್ತಿದೊಡೆ ತೆಂಕಣಗಾಳಿ ವಿಳಾಸಿನೀಜನಂ ।
ಮಾವಿನಗೊಂಚಲಂ ಕಿವಿಯೊಳಿಟ್ಟೊಡೆ ಬಂದುದು ಸುಗ್ಗಿ ಬೆಂದವಂ ॥
ಸಾವಿನ ಮೆಚ್ಚಪಂ ಬಿರಯಿಯುಂ ಸ್ಮರನೆಂದೊಡೆ ದಂಡಮುಂಟುಲೀ ।
ಲಾವತಿಯಾಣೆಯೆಂದು ಕಳಭಾಷಿಣಿ ಸಾಱಿಸಿದಳ್ ಪ್ರಮೋದದಿಂ ॥೧೩೫॥

ಅಂತು ಸಾಱಿಯುಂ ಸಾಱಿಕೊಳ್ಪಮಾಪುರಿಗಂಗೆ ದೋಷವಿ ಲ್ಲೆಂಬಂತೆ ಜಯವೊಡೆದಿಸುವ ವಿಷಮಶರನ ಶರಪ್ರಹಾರದಿಂ ಕಿಡಿವಿ ಟ್ಟಂತೆಯುಂ, ಸಂಕಲ್ಪಕಾಷ್ಠದಂ ಪೊತ್ತಿದಂತೆಯುಂ ಚಿಂತಾನಳನಿಸುರಿ ದಂತೆಯುಂ, ಅರಿದೆನಿಸಿ ಸಖೀಜನಂ ಮಾಡ್ಪಶಿಶಿರೋಪಚಾರದಿಂದ ಮುಮಾ ಱದೆ ಮಾಱಿ ವಿಷಮವಹ್ನಿಯಂತಿರಾವರಿಸುವ ವಿರಹ ವಹ್ನಿಯಿಂ ಕಿಚ್ಚಿ ನೊಳ್ ಬಿರ್ದ ಕೀಡಿಯಂತೆ ಕಱಗಿ ಕೊರಗುವ ಕಾಂತೆಯನೇಕಾಂತದೊಳ್ ಕಳಾವತಿಯಿಂತೆಂದಳ್—

ಇಂಗಿತಮುಱಿವರ್ ಬಲ್ಲರ್ ।
ಭಂಗಿಗಳಂ ಕೆಳದಿ ನಿನಗೆ ಪಿರಿದುಂ ಕೂರ್ಪರ್ ॥
ಪಿಂಗಿಸಿದ ಪರೆಂತುಂ ನಿ ।
ನ್ನಂಗಜವೇದನೆಯನೀನಿಜಪ್ರಿಯಸಖಿಯರ್ ॥೧೩೬॥

ಆದೊಡವೊಂದನೆಂಬೆನೆ ಸಖೀ ಬಱಿದೇಕೆ ಸಖೀಜನಕ್ಕೆ ಪಂ ।
ಗಾದಪೆಯಾಗದಾರ ದೆಸೆಯಿಂದಮುಮಪ್ಪೊಡೆ ದೈವಯೋಗದಿಂ ॥
ದಾದ ಪುದಾರಿದಂ ಮೊದಲೊಳಂ ಸಮಕಟ್ಟಿದರಿಲ್ಲಿ ಸಂದೆಗಂ ।
ಗೋದಿರವೇಡ ದೈವಬಲಮುಳ್ಳವರ್ಗಾಗದುದುಂಟೆ ಲೋಕದೊಳ್ ॥೧೩೭॥

ಅನುಪಮ ಕೀರ್ತಿಕಾಂತನ ಮನೋಹರರೂಪನ ಮಾನ ಮೇರುಶೈ ।
ಲನ ಕಮನೀಯ ನಾಯಕನ ಸಜ್ಜನ ಸೇವ್ಯನ ಸೂಕ್ತಿ ಕರ್ಣಪೂ ॥
ರನ ಸಹಜಪ್ರಮೋದನ ಕಳಾರ್ಣವತೀರನ ಕೋಮಳ ಸ್ವಭಾ ।
ರನ ಕವಿರಾಜ ಮಲ್ಲನ ವಿನೀತನ ನೂತನದಾನಧೀರನಾ ॥೧೩೮॥

ಇದು ವಿದಿತ ವಿವಿಧ ಪ್ರಬಂಧ ವನವಿಹಾರ ಪರಿಣತ ಪರಮ ಜಿನಚರಣರಮ್ಯ
ಹೈಮಾಚಳೋಚ್ಚಳಿತ ನಖಮಯೂಖ ಮಂದಾಕಿನೀಸಕ್ತ ಸಂತ
ತೋತ್ಸಿಕ್ತ ದಾನಾಮೋದ ಮುದಿತ ಬುಧಮಧುಕರ

ಪ್ರಕರ ಕವಿರಾಜಕುಂಜರ ವಿರಚಿತಮಪ್ಪ
ಲೀಲಾವತೀ ಮಹಾಪ್ರಬಂಧದೊಳ್

ವಸಂತ ಸಮಯ ವರ್ಣನಂ

ನವಮಾಶ್ವಾಸಂ

ಸಂಪೂರ್ಣಂ

# ದಶಮಾಶ್ವಾಸಂ

ಶ್ರೀ ವಿನಯ ವಿಳಾಸನ ಕೈ ।
ದಾವರೆಯುಂ ಸಿರಿಯ ಸ್ಯೆಪು ತನಗುಳ್ಳೊಡವೇಂ॥
ದೈವದಿನವುಖವುದಿಲ್ಲದೊ ।
ಡಾವಳ್ಗಂ ಪಿಡಿವುದರಿದು ಪಂಕಜವದನೇ ॥೧॥

ಕಿನ್ನರ ಖಚರ ಸುರಾಸುರ ।
ಪನ್ನಗ ಪೂಜಿತೆಯೆನಿಪ್ಪ ಪದ್ಮಾವತಿಯಂ ॥
ಸನ್ನಿಹಿತೆಯನಾರಾಧಿಸು ।
ನೀನ್ನೆರೆವೊಡೆ ಮನದೊಳಿರ್ದ ಮಹಿಮಾರ್ಣವನೊಳ್ ॥೨॥

ವ॥ ನೀನು ಮಾದೇವಿಯ ಪಸಾಯದಣುಗಿನ ಕೂಸಪ್ಪುದಱಿಂ ನಿನ್ನ ವಸ್ಥೆಯಂ ಕಂಡು ಕಡೆಗಣಿಸಲಱಿಯದಿನ್ನೆವರಂ ನಿನ್ನಿನಿಯಂ ತನ್ನ ಸಾಮರ್ಥ್ಯದಿಂದಿಲ್ಲಿಗೆ ಬರಿಸುವುದುಂ ದೊರೆಕೊಳ್ವುದೆಂದು ಪೇೞ್ದ ಸಖಿಯ ಮಾತು ಮನಃ ಪ್ರಿಯನಂತೆ ಮನಂಬುಗೆ ಪೋಗಿ ದೈವಮೆ ದಯಿತನಾದಂತೆ ಶಿಶಿರೋಪಚಾರಕ್ಕಂ ದೇವತಾಪೂಜೋಪಚಾರಕ್ಕಂ ಏಕಾಸ್ಪದಮಾದ ಕುಸುಮಪುರದ ಪೊಱವೊೞಲ ವಸಂತಕರೋದ್ಯಾನದ ನಡುವೆ ವಸಂತ ಲಕ್ಷ್ಮಿಯಿರ್ಪಂತೆ ನೆಲಸಿ ನಿಂದ ಪದ್ಮಾವತಿಯಂ ಲೀಲಾವತಿ ಬಲಂಗೊಂಡು ಪಿಡಿವೂವನೀಡಾಡಿ ನಿಜ ಪ್ರತಿಬಿಂಬದೊಳ್ ಮುಂಡಾಡುವಂತೆ ಮಣಿಪೀಠ ದೊಳ್ ಪೆಱತೆನೊಸಲ ನಿಟ್ಟು ಪೊಡೆಮಟ್ಟು ಕೆಯ್ಗಳಂ ಮುಗಿದು ಮುಂದೆ ನಿಂದು,

॥ ತ್ರಿಪದಿ ॥

ಸೋವಾಗಕೆಱೆಯುಳಿಂದೀವರ ಲೋಚನೆ ।
ದೇವಸ್ತ್ರೀ ಚತುರ ಪರಿಪ್ಪೃತಪಾದೆ ಪ ।
ದ್ಮಾವತಿ ವರದೆಯೆಮಗಕ್ಕೆ ॥ (೧)

ಎಂದು

ಕತ್ತುರಿಯ ಸಾರವಣೆ ಬಿಡು ॥
ಮುತ್ತಿನ ಕಂಪುವಿಡುವ ಕಪ್ಪುರವಿಡಿಯಿಂ ॥
ದೊತ್ತಿದ ಲತೆ ಪೂವಟ್ಟೆಯಿ ।
ನೊತ್ತಿರಿಸಿದ ಬಂಧವಸೆಯೆ ದೇವಿಯ ಗೃಹದೊಳ್ ॥೩॥

ಪೊಂಪುಟೀಯೆನೆ ಕರ್ಪೂರದ ।
ಕಂಪು ಮೃಗೋದ್ಭವದ ಕಂಪು ಮಲಯರುಹದ ತ ॥
ಣ್ಗಂಪರಲ ಕಂಪು ಘುಸೃಣದ ।
ಕಂಪು ಕಳಾವತಿಯ ಸಬಲೆಯಾರಾಧಿಸಿದಳ್ ॥೪।

ಮಡದಿ ಮನವೊಸೆದು ಪೂವಿನ ।
ತುಡಿಗೆಗಳಿಂ ಮುಗುಳುನಸೆಯ ತುಡಿಗೆಗಳಿಂ ಪೊಂ ॥
ದುಡಿಗೆಗಳಿಂ ಪೊಸ ಮಾಣಿಕ ।
ದುಡಿಗೆಗಳಿಂ ದಿವ್ಯಸತಿಯನೊಸೆದರ್ಚಿಸಿದಳ್ ॥೫।

ಪೊಸೆಯಿಸಿದ ದುಗುಲಮೆಲರಲೆ ।
ಪದಿನಿನಿಸಲ್ಲಾಡುವಂತೆ ದಿವ್ಯಾಂಗದೊಳಿ ॥
ಕ್ಕಿದ ಧೂಪದ ಬಟ್ಟಿಯೊಳ್ ಪೊಗೆ ।
ಪುದಿದಿರೆ ಸಲ ಶೀಲಸತಿಯನಾರಾಧಿಸಿದಳ್ ॥೬॥

ಮಾಲೆಜೊಡರ್ ನವ ಚಂಪಕ ।
ಮಾಲೆಯುವೊಲ್ ಮೊಲೆಯ ಮೇಲೆ ಮಾರ್ಪೊಳೆಯೆ ಕರಂ ॥
ಲೀಲಾವತಿ ಪತಿಯೀಪ್ಸಾ ।
ಲೋಲತೆಯಿಂದೊಸೆದು ದೇವಿಯಂ ಪೂಜಿಸಿದಳ್ ॥೭॥

ಪೂವಿನ ಪಾಶಮಂ ವಿಪುಳಹೇಮಫಳಂಗಳನಿಂಬುವೆತ್ತ ಪೊಂ।
ಗಾವಿನ ವಜ್ರದಂಕುಶಮಸಂಕಿತ ಕುಂಕುಮ ಪದ್ಮ ಪುಷ್ಪಮಂ॥
ತೀವಿ ತಳಂಗಳೊಳ್ ಕರ ಚತುಷ್ಟಯಮೊಪ್ಪಮನಪ್ಪುಕೆಯ್ಯೆಪ।
ದ್ಮಾವತಿಯಂ ವಿಳಾಸವತಿ ಪೂಜಿಸಿದಳ್ ಪತಿಲಾಭಕಾಂಕ್ಷೆಯಿಂ ॥೮॥

ಉಜ್ಜ್ವಳಿಸುವ ಮಳಯಜದಿಂ।
ಮಜ್ಜನಮಂ ಮಾಡಿ ಮುಡಿಗೆ ಪೊಸಮಲ್ಲಿಗೆಯಂ॥
ಗೊಜ್ಜಿಗೆಯುಮನೇಱಿಸಿ ಸಲೆ।
ಬಿಜ್ಜೋದರಿ ದಿವ್ಯಸತಿಯನಾರಾಧಿಸಿದಳ್ ॥೯॥

ಕಳೆಯಂ ಪತ್ತಿಸಿ ಜೀವೆಯಂನಿಱಿಸಿ ಮೆಲ್ಪಿಂ ತಂತಿಯಂ ಸೀಡಿ ಕಾ।
ಕಳಿಯೊಳ್ ವೀಣೆಯನಾಗುಮಾಡಿ ಮಿಡಿಯುತ್ತಾರಯ್ಯೆ ನುಣ್ಗಾವರ॥
ಕ್ಕಳಿ ಪೂವಂ ಗಿಳಿ ಪಣ್ಣನೇಱಿಸೆ ಲಸಚ್ಚೂತಾಂಕುರಾಸ್ವಾದಮಂ।
ಕಳಕಂಠಂ ಬಿಡೆ ಬಾಲೆಯಾಲಪಿಸಿದಳ್ ತ್ರಿಸ್ಥಾನಸಂಶುದ್ಧಿಯಿಂ ॥೧೦॥

ಸುತಿಯಂ ಕಾಕಳಿ ತಾನಮಂ ಲಯವಿತಾನವ್ಯಕ್ತಿಯಂ ಧಾತುಗಳ್॥
ಜತಿಯಂ ಸ್ಥಾನಕ ವೀಣ ತಂತಿಯ ಸರಂ ಶಾರೀರದಿಂಪಿಂ ಕರಂ॥
ಶ್ರುತಿಯಂ ಸೋಲಿಸೆ ಬಾಲೆ ಬಾಜಿಸುತೆ ಜಾಣಿಂ ಬೀಣೆಯಂ ಗಾನದೇ।
ವತೆವೊಲ್ ಕೇಳಿಸಿದಳ್ ಕಳಾಕುಶಲೆಯಂ ಪದ್ಮಾವತೀದೇವಿಯಂ॥೧೧॥

ಅಂತು ಪಾಡುವಾಗಳ್,

ದೇವಿಯ ವದನಾಂಬುಜದೊಳ್॥
ತೀವಿದ ಕಪ್ಪುರಕೆ ಪಾಯ್ದು ಪಾಯ್ದಳಿನಿವಹಂ॥
ಗಾವರಿಸೆ ರಾಗದಿಂ ಪ।
ದ್ಮಾವತಿಯುಂ ಕೂಡೆ ಪಾಡುವಂದದಿನೆಸೆದಳ್ ॥೧೨॥

ಜಲಜದ ಕನ್ನವುರಂ ತೆಂ।
ಬೆಲರಲೆಪದಿಸಲುಗುವಂದಮೇನೆಸೆದುದೊ ಕಾ॥
ಕಲಿಗೆ ಕರವೊಸೆದು ದೇವತೆ।
ತಲೆಯಂ ತೂಗಿದವೊಲಾಗಳಾಕಳರವೆಯಾ ॥೧೩॥

ಆಗಳಿಂಚರದೊಳ್ ಬೆರಸಿದ ತನ್ನ ಕಸಱಿನೆ ಕಿಱುಮಿಂಚಿನ ಬಳ್ಳಿಯು ಮೊಱಗುಗೆತ್ತು ಮೂರ್ಛೆವೋಗಿ ಕಮಳಿನಿಯುಂ ಮಲಂಗುವ ಮದಮುಗ್ಧ ಮದಾಳಿಯಂತಿರೆ ಆಲಪಿಸುವ ತನ್ನಿಂಚರಮುಮಂ ವಿಪಂಚಿಯು ನುಣ್ಚರ ಮುಮಂ ಮನಮಂ ತಾಗುವ ಮನಸಿಜನ ಪಂಚಶರವೆಂದೇ ಕಡುನೊಂದು ಕೆಲದೊಳಿರ್ದ ಕಳಾವತಿಯ ಮೇಲೆ ಮಱಿದೊಱಗಿದ ಲೀಲಾವತೀದೇವಿಯ ದರ್ಶನದೊಳ್ ದೇವಿಯಿಂತೆಂದಳ್:—

ಸುಂದರಿಯೊಳಗಂ ಮೂರ್ಛೆಗೆ ।
ಸಂದಿರಲುತ್ಪಲಿನಿಗಮೃತ ಕಿರಣಂ ಬರ್ಪಂ ॥
ತ್ರಿಂದಿದಿರೊಳ್ ನಿನ್ನಿನಿಯಂ ।
ಬಂದಪನಿದನಿಂತೆ ನಂಬು ಕಮಳದಳಾಕ್ಷೀ ॥೧೪॥

ಮೆಯ್ದೆಗೆಗೆ ಮಱುಕಮಱಿಕೆಯು ।
ನೆಯ್ದುಗೆ ಬಗೆ ನಿನ್ನ ಕನ್ನೆಮಾಡದೊಳೊಪ್ಪಂ ॥
ಗೆಯ್ದಪರಾಂಗಣದೊಳ್ ಕೈ ।
ಗೆಯ್ದಿರು ಕೈಗೆಯ್ದಿದಪ್ಪನಿಂದು ನಿಜೇಶಂ ॥೧೫॥

ಎಂಬ ದೇವಿಯ ನುಡಿಯೆಂಬ ತಣ್ಣೆಲರ ತೀಟದೊಳೆಚ್ಚತ್ತು ತುಂಬಿ ಕೆಣಕಿದ ಕಂಪಿನಂತೆ ಭೋಂಕನೆಱ್ದು ನೀರೊಳ್ ಮುಱುಗಿ ನೆಗೆದಂತೆ ಬೆಬ್ಬಳಿಸಿ ನೋಡಿ ಕವಿಯಂತೆ ಪರಿಭಾವಿಸಿ ಕಲಂಕಿದ ತೊಱೆಯುಂ ಕಂಡಂಬಿಗ ನಂತೆ ದೇವಿಯ ವರಮನಱಿದು ನವಗರ್ಭಿಣಿಯಂತೆ ಬಯಕೆಗೂಡಿ ಬೇಸಗೆ ದೊಱೆಯಂತೆ ತಣ್ಣೀರ ಪರಿಯುಡುಗೆ ಕಲಿಯುಂ ಶರಣ್ಬೊಕ್ಕ ಭೀರುವಿನಂ ತಿರಿರ್ದೆಯುಱ್ಗಮುಱ್ಗಿ ತೀವ್ರಜ್ವರಮಂ ತಂಪುಗೆಯ್ದಂತೆ ಸಂತಾಪವೊಳ ಸಾರೆ ಸೊಗಸಿನ ಪದ್ಮದಂತೆ ಮೊಗಮಲರೆ ಅಮರ್ದಿನೊಳಱ್ದ ನೆಯ್ದಲಂತೆ ನಯನಕಾಂತಿಯಿಂ ನಯವೇಱಿ ಮಗುಱ್ಚದ ದೀಪಕಳಿಕೆಯಂತೆ ಕೊರ್ಬಿ ಕಾರ್ಗಾಲದ ನವಿಲಂತೆ ನಲಿದು ಸುಗ್ಗಿಯ ಕೋಗಿಲೆಯಂತೆ ರಾಗಿಸಿ ಪಗಲ ಮೊಗಂಗಂಡ ಜಕ್ಕವಕ್ಕಿಯಂತೆ ಸಂತಾಪದಂತಮನೆಯ್ದಿ ಸಿಂಗರಂಗೆಯ್ದಳಂ

ತಿರಾನಂದಂಬಡೆದೆನೆಂದು ಮೇಳಕಾರ್ತಿಯಂತಿರಾಳಿಗುಸಿರ್ದುದ ವಿಲಾಸಲ್ಗಳೆ ವರಂತೆ ದೇವತೆಗೆ ಪೊಡೆವಟ್ಟು ಪಾರಿವದಂತೆ ನೆಲೆ ಮಾಡಕೆ ಪೋಗಿ ಕಾಲೂರ ಸೂಳೆಯಂತೆ ರಜನಿಯುಬರವಂ ಪಾರುತ್ತುಮಿರ್ಪಿನಮಸ್ತ ಗಿರಿಶಿಖರವೆಂಬ ಸಂಕೇತಸದನಕ್ಕೆ

ಬಿಸುಪಿಂದಂ ಸೋಂಕಿ ಬಾಱಿತ್ತೆಯ್ದಲಸೊಣಗಿಸುತುಂ ಮೆಯ್ಯ ನೀಡಾಡಿ ಮೆಯ್ಗಂ ।
ದಿಸುತುಂ ತಾರಾಪ್ರಸೂನಂಗಳನೆಳವಿ ನವೀನ ಪ್ರವಾಳಂಗಳಂ ಬಾ ॥
ಡಿಸುತುಂ ಕೈಗುತ್ತಿಕೊಂಡುರ್ಕಿಸುತು ಮಖಿಳತೋಯಂಗಳಂ ತದ್ವಿಯೋಗಾ ।
ವಸಿತಂ ಬರ್ಪಂತೆ ಬಂದಾಱಿದನಪಗತ ಸಂಧ್ಯಾಪ್ರಸಂಗಂ ಪತಂಗಂ ॥೧೬॥

ಪೂಡುವ ಕುದುರೆ ಬೆಸಂಗೊಂ ।
ಡೊಡುವ ತೇಗೊರ್ಗಂದೆ ಗಾಲಿಯೆಸಪಂ ಪೆಱವಂ ॥
ಕೇಡಿನ್ನೆಲಸಿದೊಡಕ್ಕುಮೆ ।
ನೋಡಿರೆ ರವಿಕೆಡೆದನಸ್ತಗಿರಿ ಮಸ್ತಕದೊಳ್ ॥೧೭॥

ಸೋಂಕೆ ಕರಗುತ್ತೆ ಸಂಜೆಕ ।
ರಂ ಕಡುಪಿನೊಳಪ್ಪೆ ನೆಗೆದ ರೋಮಾಂಚಂಗಳ್ ॥
ನೂಂಕಿ ಕಳೆದಂತೆ ಕೆಡೆದಂ ।
ಪಂಕಜಸಖನಾಗಳಪರಜಳನಿಧಿಜಳದೊಳ್ ॥೧೮॥

ಪರಿಣತದಿನ ಶಿರದಂತಿರೆ ।
ಖರಕಿರಣಂ ಕಾಲಚಕ್ರಹತಿಯಿಂ ಕೆಡೆಯಲ್ ॥
ಸುರಿದು ಪರೆದರುಣಜಲದಂ ।
ತಿರೆ ಪಸರಿಸುತಿರ್ದುದಪರಸಂಧ್ಯಾರಾಗಂ ॥೧೯॥

ಅಂತುಮಲ್ಲದೆ,

ಅಂಬರಮಣಿ ಮುೞುಗಿದನಿಂ ।
ತುಂಬುವಿನಂ ಹಿಮಕರಾಂಶುಗಳ್ ಪತ್ತುವುವೆಂ ॥
ದಂಬರಹರಿ ಪೊದೆಯಲ್ ಪೀ ।
ತಾಂಬರಮಂ ತೆಗೆದನೆನಿಸೆ ಸಂಧ್ಯಾರಾಗಂ ॥೨೦॥

ಅಲ್ಲಿಂ ಬೞಿಯಂ
ಕಿಸುಸಂಜೆ ಕಿಚ್ಚುವೊಲ್ ಪೊ ।
ತ್ತೆ ಸುರನಿಕೇತನಮನಂದು ನಂದಿಸಲಿಂದ್ರಂ ॥
ಬೆಸಸಿದ ನೀಲಾಂಭೋಧರ ।
ವಿಸರವಿದೆನೆ ಮೂಡ ಮೂಡತಿರ್ದುದು ತಿಮಿರಂ ॥೨೧॥

ಬಯಲೊಳ್ ತಕ್ಕಂಗೆ ಪೇೞ್ದುತ್ತಿಕ್ಕದೆ ಕುಲವಧುವೊಳ್ ಕೂಡಲೆಂದು
ಚ್ಚವೀಚೀ ।
ಶಯನೀಯ ಶ್ರೀಯಸಂದಾಪವರುಣಶರಣಮಂ ರತ್ನದೀಪಪ್ರಭಾಸಂ ॥
ಚಯಮಂ ಕೈಸನ್ನೆಗೈಯ್ಯುತ್ತಿನನೊಳಪುಗೆ ಬೆಂಬೆಸ್ನನುದ್ಭೂತರಾಗೋ ।
ದಯೆ ಸಂಧ್ಯಾದೇವಿಯುಂ ಪೊಕ್ಕವೊಲಡಗಿದಳೇನೆಂಬೆನಾಶ್ಚರ್ಯ
ದುರ್ಬಂ ॥೨೨॥

ಪೊಕ್ಕ ಪುಗಿಲೊಳೆ ಪೊಸಲ್ಪರಿ ।
ದೊಕ್ಕೆಱೆಯದ ನೆತ್ತರಂತೆ ಸಂಜೆ ಕರಂ ಕೈ ।
ಮಿಕ್ಕೊದವೆ ರಾತ್ರಿ ರಾಕ್ಷಸಿ ।
ನಕ್ಕಿದಳೆನೆ ಮಾಯಮಾದುದಂತಾಕ್ಷಣದೊಳ್ ॥೨೩॥

ಓಸರಿಸೆ ಸಂಜೆ ಜವನಿಕೆ ।
ಯೋಸರಿಸಿದ ತೆಱದೆ ರಾತ್ರಿನರ್ತಕಿ ಪುಗುತಂ ॥
ಸೂಸಿದ ಪುಷ್ಪಾಂಜಳಿಯೆನೆ ।
ಭಾವಿಸಿದ್ದುವು ಗಗನರಂಗದೊಳ್ ತಾರಗೆಗಳ್ ॥೨೪॥

ಇನಿಸಿನಿಸೆಳಗತ್ತಲೆಯುಮ ।
ದಿಸಿಸಿನಿಸುಱೆ ವೆಳಗುವೊಡನೆ ಕಲಸಿರೆ ಕದಡಿ ॥
ತ್ತನಸುಂ ಪ್ರದೋಷ ಮಹಿಷನಿ ।
ನೆಸಿಸಿದುದು ದಿಗಂತಸೇತುಭುವನ ತಟಾಕಂ ॥೨೫॥

ಅಂಗಂಗಳ್ ನಸುದೆಱೆಯೆ ದಿ ।
ಗಂಗನೆಯುರ ಮೇಲೆ ಕವಿದ ತೆಳ್ಗತ್ತಲೆ ಚೆ ॥
ಲ್ವಿಂಗುಟ್ಟ ಕರಿಯ ಕಾಗಿನ ।
ಭಂಗಿಯನನುಕರಿಸುತಿರ್ದುದಂತಾಕ್ಷಣದೊಳ್ ॥೨೬॥

ದಿವಿಜೇಂದ್ರೇಭಪ್ರಭೇದಂ ದಹನ ಬಹಳಧೂಮಂ ಯಮೋಚ್ಚೈಲುಲಾಯಚ್ಛವಿಕಂ ।
ಕ್ರವ್ಯಾದಕಾಯದ್ಯುತಿ ವರುಣಗೃಹಸ್ಥಾಸ್ನ ಕೃಷ್ಣಪ್ರಕಾಶಂ ॥
ಪವನೋದ್ಯತ್ಕೃಷ್ಣಸಾರಪ್ರಭೆ ಧನದಪುರೀನೀಳ ಶಾಳಾಂಶುಜಾಳಂ ।
ಭವಕಂಠಚ್ಛಾಯೆ ಪರ್ಬಿತ್ತೆನೆ ದೆಸೆದೆಸೆಯಂ ಮರ್ಬುಪರ್ಬಿತ್ತುಗುರ್ಬಿಂ ॥೨೭॥

ಸುಮಂಗಲೀವೃತ್ತಂ

ಭಗಣಲತಾಂತ ಸಂತತಿಗೆ ಪಾಯ್ವ ವನೇಜವಸಂ ।
ಮುಗಿಯೆ ಮರಲ್ದು ಬಿಟ್ಟು ಬಿಸುಟೆಯ್ದ ಮದಶ್ರಮಮಂ ॥
ದಿಗಿಭದ ಕರ್ಣತಾಳಕಗಿದೆತ್ತಿಳಿ ಜಾಳದವೋಲ್ ।
ಗಗನದೊಳುರ್ವಿಯೊಳ್ ನೆಯೞೆ ಪರ್ಬಿದುದಂದು ತಮಂ ॥೨೮॥

ದೆಸೆಯಿದು ಭೂವಲಯಮಿದಾ ।
ಗಸಮಿದು ತಾನೆಂಬ ಭೇದಮಿಲ್ಲೆನೆ ತಮಮು ॥
ಬ್ಬಿಸಿದುದು ಜಗಮಂ ಕೃಷ್ಣಂ ।
ಬಸಿಱೊಳಗಿಟ್ಟಂತೆ ರಜನಿಚರ ಭಯದಿಂದಂ ॥೨೯॥

ಮತ್ತಮಿನಿಸಾನುಂ ಬೇಗದಿಂ

ಉಡುಪತಿ ಪತಿ ಪಿಂತನೆ ಬಂ।
ದಡಸಿ ಮುಸುಂಕಿರ್ದ ತಿಮಿರ ನೀಳಾಂಬರಮಂ ॥
ಪಿಡಿಯೆ ಭಯಮುತ್ತ್ರಪೋಲ್ ಬೆ।
ಳ್ಪಡರ್ದುದು ವದನಕ್ಕೆ ಪೂರ್ವದಿಗ್ಬಂಧಕಿಯಾ ॥೩೦॥

ಊದಿದ ಸುಟ್ಟರೆಯುದಯತ।
ಟೋದಿತವನದಿಂದೆ ಸುತ್ತಿ ಸುೞಿದೆತ್ತಿದ ಪೊಂ ॥
ಗೇದಗೆಯ ದೂಳಿಯೆನೆ ಜೆ।
ಲ್ವಾದುದು ನೆಗೆದಮೃತಕರನ ಕರ ನಿಕರಂಗಳ್ ॥೩೧॥

ಅಲ್ಲಿಂ ಬೞಿಯಂ,

ಶಿರದೊಳ್ ತಾರಾ ಕಪಾಲಂ ಪೊಳೆಯೆ ಕರಜಟಾ ಜೂಟಮಿಂಬಾಗೆ ಜೊನ್ನಂ।
ಸುರಸಿಂಧುಸ್ರೋತಮಂಪೋಲ್ತಿರೆ ತೊಲಗೆತಮೋರಾಕ್ಷಸಂ ಚರ್ಮ ಚಿತ್ರಾಂ ॥
ಬರಖಂಡಂ ಕೂಡೆ ಕಾಮಂ ಕರಮುರಿವಿನೆಗಂ ಮಂಡಳಂಗೊಂಡು ಪೆರ್ಬು।
ತ್ತಿರೆ ಸಂಧ್ಯಾರಾಗನೇತ್ರಾನಲಸುದಯಿಸಿದಂ ಚಂದ್ರ ಚಂದ್ರಾರ್ಧ ಚೂಡಂ ॥೩೨॥

ಆಗಳ್ ಚತುರ ಚತುರಿಕಾ ಪ್ರಶ್ನೋತ್ತರಂಗಳ್ ನೆಗೞ್ದುವದೆಂತೆನೆ:–

ಯುವತೀ ನೇತ್ರೋತ್ಪಲಂ ಮುಂತಲರೆ ಕುವಲಯಂ ಪಿಂತೆ ಚೇತಶ್ಚಕೋರೀ।
ನಿವಹಂ ಮುಂತಾಚಕೋರ ಪ್ರತತಿ ನಲಿಯೆ ಪಿಂತುರ್ಚಿ ಭೂಲೋಕ ರಾಗಾ ॥
ರ್ಣವಮೆಲ್ಲಂ ಮುಂತೆ ಪಿಂತರ್ಣವಮೊಗೆವುದಿದೇಂ ರೋಹಿಣೀಮಾನ ಮುಕ್ತ
ಪ್ರವಿಲಗ್ನಾಪಾಂಗ ರಕ್ತದ್ಯುತಿ ಲಲಿತಲಸಚ್ಚಂದ್ರಿಕಾಚಂದ್ರಬಿಂಬಂ ॥೩೩॥

ಪಿರಿದುಂ ಲೀಲಾವತೀದೇವಿಯು ನಿಜವದನ ಜ್ಯೋತ್ಸ್ನೆಯಿಂಕೊಳ್ಳೆನಾನೆಂ।
ದುರಿಯುಂತಬಿಕ್ಕೈಸಿ ದಿವ್ಯಂಬಿಡಿವವೊಲು ದಯಾವಸ್ಥೆಯೊಳ್‌ಸಂಜಿಗೆಂಪಾ ॥
ವರಿಸಿತ್ತಲ್ಲಿಂಬಟಿಿಕ್ಕೇಟಿಡಿ ನಡೆದದನೀಡಾಡಿ ನಿಂದಂತೆಬೆಳ್ವ ।
ಬ್ಬರಿಸಿತ್ತಲ್ಲಿಂಬಟಿಿಕ್ಕೇನೆಸೆದುದೊ ಶಶಿಯೊಳ್ ಸೋಲ್ತು ಬೆಂದಂತೆ
ಚಿಹ್ನಂ ॥೩೪॥

ಇದು ನಾನಾಕೈರವೌಘಸ್ಮಿತದಿನೊದವಿತೋ ಕ್ಷೀರವಾರಾಶಿಪೂರಂ ।
ಪುದಿಯಲ್ ಪೆರ್ಚಿತ್ತೊ ಚಿತ್ತೋತ್ಸವಕರತರುಣೀಲೋಚನ
ಜ್ಯೋತ್ಸ್ನೆಯಿಂ ಕೊ ॥
ರ್ಬಿದುದೋ ಪೇಟಿಿಂಬವೋಲೊರ್ವೊದಲೆ ಕವಿದಚಂದ್ರಾ
ತಪಸ್ರೋತದೊಳ್ ತೀ ।
ವಿದುದಾದಂ ತೇಂಕಿದಂತಿರ್ದುದು ಸಕಲದಿಶಾವ್ಯೋವು
ಭೂಮಿಪ್ರತಾನಂ ॥೩೫॥

ಅಂತು ಪಸರಿಸಿದ ಪೊಸವೆಳ್ದಿಂಗಳ್ಗೆ ಪಸದನವೆನಿಸಿ ಪಸದನಂಗೆಯ್ದಾ
ನಸು ಬಿರಿದಚ್ಚಮಲ್ಲಿಗೆಯ ಸೋರ್ಮುಡಿಯಿಂ ಸಿರಿಗಂದದಣ್ಪಿನಿಂ ।
ಮಿಸುಗುವ ಮುತ್ತಿನಾಭರಣದಿಂ ಸುಲಿಪಲ್ಗಳ ಸೂಸುವೆಳ್ಪಿನಿಂ ॥
ದೆಸೆವ ದುಕೂಲದೊಂದುಡೆಯಿನಂದಮೃತಾಂಶುಮರೀಚಿಯಿಂದೆ ನಿ ॥
ರ್ಮಿಸಿದವೊಲೊಪ್ಪಿದಳ್ ಧವಳಲೋಚನೆ ವಾಸವದತ್ತೆ ದೇಸೆಯಿಂ ॥೩೬॥

ಮಸೆದೆಳಮಿಂಚೊ ರಂಜಿಸಿದ ರತ್ನಶಲಾಕೆಯೊ ಕಾಮದೇವನ ।
ರ್ಚಿಸಿದಲರಂಬೊ ಪೂತ ಲತೆಯೋ ಸನೆಯೇಟಿ ಮಡಲ್ತಮಾವೊ ನು ॥
ಣ್ಣಿಸಿದ ಮೃತಾಂಶುಲೇಖೆಯೊ ವಿಲೋಚನಮಿಟ್ಟ ಸಜೀವ ಚಿತ್ರಮೋ ।
ಪೊಸನನೆದೊಟ್ಟ ಪದ್ಮಿನಿಯೊ ಕೈಗೆಯೆ ಕಣ್ಗೆಸೆದಿರ್ದ ಕಾಂತೆಯೋ ॥೩೭॥

ಅಂತು ಕೊಬ್ಬೆಂಬ ಕಿಟ್ಟಮುದುರೆ ಪಸುವರ್ಣ್ಣಮೆಂಬ ಕಾಳಿಕೆ ಕಟಿಲೆ
ವಿರಹಾಗ್ನಿಯಿಂ ಕಾಯ್ಸಿ ಕುಸುಮಕಾಂಡದಿಂ ಪೊಯ್ದು ನೀರ್ದಳಿಪದಿಂ

ನೀರೂಡಿ ತಳಿರಿಂ ತೊಡೆದು ಬೆಳ್ದಿಂಗಳಿಂ ಪುಳಿಗರ್ಚಿ ಕುಸುಮಶಯನ ಶಾಣ ದೊಳ್ ಪೊಸವೆಳ್ಪು ಪಸರಿಸಿ ಕುಸುಮಶರನೆ ಎಸುಗೆ ಮಸೆದಸಿಯಂ ತಿರೆಸೆವಸಿಯ ಮೆಯ್ಗೆ ಮೆಯ್ಸಿರಿಯಾದ ಬೆಳ್ಪಸನದಿಂ ತುಹಿನಕರಕಾಂತಿ ಕವಿದ ಕುಮುದಿನಿಯಂತೆ ಕಣ್ಗೆವಂದು ಕೆಳದಿಯರ್ ವೆರಸು ದೇವಿಯ ವರಮಂ ತಿಳಿಪಲ್ ಬಾಂದಳವೇಱುವಂತೆ ಮಾಡಮನೇಱಿ ಎಂಚಿಂಕಡೆದಂತೆ ಕಣ್ ಕೋರ್ಸೆಯುಂ ಕಿರ್ಚು ಪುಗುವಂತೆ ಮೆಯ್ಯುಗುರ್ಬಿಸೆಯುಂ ಕಾದಲ ನೊಳ್ ಕೂಡುವಾಸೆಯುಂ ಮಸಂಬಲಿದು ಬೆಳ್ದಿಂಗಳೊಳ್ ಪೊಕ್ಕು ಪರಾಂ ಗಣದೊಳ್ ಪೊಚ್ಚಪೊಸವಡಿಯಿಂ ಪಚ್ಚವಡಿಸಿದ ಹಂಸತೂಳತಳ್ಪಮಂ ಸಿರಿ, ಸಿತಸರಸಿಜದ ಸಜ್ಜೆಗೇಱುವಂತೇಱಿದ ಬೇಗದಿಂ ಕೆಳದಿಯರಂ ಕೆಯ್ತ ದಿಂದಮೆ ಕಳಿಪಿ,

> ದೂತೀಪ್ರೇಷಣಕೃತಸಂ।
> ಕೇತಾದಿಗಳೊಂದುಮಿಲ್ಲ ನಲ್ಲನ ಬರವಿಂ ॥
> ಗಾತರುಣಿ ಪಾರ್ದಳಾಪ್ತರ ।
> ಮಾತುಗಳಂ ನಂಬಿದವರ್ಗೆ ಸಂದೆಯಮುಂಟೇ ॥೩೮॥

ಅಂತು ಪಾರುತ್ತುಮಿರ್ದು ಚಕೋರಿಗಳಂ ಚೆಲ್ಲವಾಡಿಸುವಂತೆ ನವ ಚಂದ್ರಿಕೆಯನೋಲಗಿಸುವಂತೆ ಮೆಯ್ಯನಿಕ್ಕಿದಾರಮಣಿಯಮೃತಕರಬಿಂಬ ಮನವಲೋಕಿಸುತ್ತುಂ ಇನಿಯನಂ ಮನದೊಳ್ ಭಾವಿಸುತ್ತುಮಿರೆಯಿರೆ,

> ಮೃಗಮದದೊಳ್ ಪೊರಬ್ದು ಪೊಸಸೌಸವದೊದ್ದೆಯೊಳಬ್ದು ಬಿಬ್ದುಮ।
> ಲ್ಲಿಗೆಯ ಪರಾಗದೊಳ್ ಪೊರೆದು ಕಪ್ಪುರದೊಳ್ ಸುಱಿಗೊಳ್ವ ಧೂಪದೊ॥
> ಳ್ಪೊಗೆಗಳನೆತ್ತಿ ಪೂವಲಿಗೆ ಪಾಯ್ವ ಮದಾಳಿಯ ಬಾಯ ಕಂಪನಾ।
> ವಗಪೊಡೆ ಸೂಱೆಗೊಂಡೆಸಗಿತಿಮ್ಮಗೆ ಕಮ್ಮಗೆ ಮಂದಮಾರುತಂ ॥೩೯॥

> ಸ್ತನಚೀನಾಂಶುಕ ಭಾರಮಂ ಸೆಳೆಯುತಂ ರೋಮಾಂಚಮಂ
> ಮೆಯ್ಗೊಳ್।
> ತೊನೆಸುತ್ತುಂ ಕುರುಳಂ ಚಲಂದೆಗೆಯುತುಂ ಶೃಂಗಾರಸಾರಸ್ಮಿತಾ॥
> ನನಪಂಕೇಜದ ಕಂಪನೀಟ್ಟುಕೊಳುತುಂ ಮಂದಾನಿಳಂ ಸೋಂಕೆ ತ।
> ನ್ನಿನಿಯಂ ಬಂದಮರ್ದಪ್ಪಿದಂತೆ ಸುಖದಿಂ ಕಣ್ಗೆಯ್ದಳೆರ್ಪನ್ನೆಗಂ ॥೪೦॥

ಅಂತು ಮಯೂಖನಿರ್ಝರಗಿರಿಯೊಳ್ ಹಿಮಕರಕಿರಣಂಗಳ್ ಕೋೞಿಂ ಕಾಯ್ದು ರವಿಕಾಂತದೊಳ್ಗಿರ್ಚಿನಂತೆ,

ಅತ್ತುರ್ವೀಪಾಲಕಂಗುರ್ವಿದ ಮದನಮಹಾತಾಪಮಂ ಕಾಣುತುಂ ಬೆ ।
ಳ್ಕುತ್ತಂಭೋಜಾಕರಕ್ಕಂಬುಜದಲಗಳನಾಯಲ್ಕೆ ಪೊದಂ ಪ್ರಧಾನೋ ॥
ಚ್ಚಿತ್ತಂ ತನ್ಮಂತ್ರಿಪುತ್ರಂ ಪೊೞಗಪರಪಯೋರಾಶಿ ಘೋಷಪ್ರಭಂ ಪೊ ।
ಣ್ಮಿತ್ತಾಗಳ್ ರತ್ನಕೂಟಾದ್ರಿಯೊಳಜಿತ ಜಿನಸ್ನಾನ ಭೇರೀನಿನಾದಂ ॥೪೧॥

ಅದಂ ಕೇಳ್ದು ಕಾರ ಮೊೞಗಂ ಕೇಳ್ದ ನವಿಲಂತೆಯಾನಂದಿಸಿ ನಂದೀಶ್ವರ ಪರ್ವಪೂಜಾನಿರ್ವೃತ್ತನಮೆಂದಱಿದು ಪೂಜಾವಲೋಕನೋತ್ಸುಕರಾಗಿ ರಾಗದಿನಾಚಂದ್ರಲೇಖೆಯುಂ ವಿದ್ಯುಲ್ಲೇಖೆಯುಂ ಪೋಗಲುದ್ಯೋಗಂ ಗೆಯ್ದು ಪೂಗಣೆಯ ಪುಣ್ಬೇನೆಯುಂ ಪೊರೞ್ದು ಮೂರ್ಛೆವೋದ ಮಹೀಪತಿಯಂ ಕಂಡು ಏಕಾಕಿಯನೇಕೀಡಾಡಿ ಪೋಪಮೆಂದು ಪರ್ಣಲಘು ವಿದ್ಯೆಯಿಂದೆತ್ತಿಕೊಳಿಸಿ,

ಭರದಿಂದೆ ಪಾಱಿ ಪೋಗು ।
ತ್ತರವಿಂದಾನನೆಯರಾಸಿತಂಬಿನಿಯಿರ್ದರ್ ॥
ಸಿರಿಮಂಚದೊಳವನಿಪನಂ ।
ಕರತಳದಿಂ ವಿದ್ಯೆಯಿಂದವಿೞಾಡಾಡಿಸಿದರ್ ॥೪೨॥

ಅಂತು ಬಾಳಮರಾಳಿ ಪವಡಿಸಿದ ಪುಳಿನತಲದೊಳ್ ರಾಜಹಂಸನ ನೀಡಾಡಿ ಪೋಪಂತಿರಾಕೆ ಪವಡಿಸಿದ ಸಜ್ಜೆಯೊಳರಸನನಾವಿದ್ಯೆಯಿಂ ಮೆಲ್ಲ ನೀಡಾಡಿ ಪೋಪುದುಮಾಸಪ್ಪುಳ್ಗಂದೆ ಭೋಂಕನೆೞ್ದು,

ವನಿತೆ ಮುರಿದೇೞೆ ಕುಚಚಂ ।
ದನ ಶೀತಳಸೇಕದಿಂದಮೆೞ್ಚತ್ತನೊ ತ ॥
ಣ್ಣನೆ ತೀಡುವೆಲರಿನೆೞ್ಚ ।
ತ್ತನೊ ಪೇೞೆನೆ ನೃಪತಿ ಮೂರ್ಛೆಯಿಂದೆೞ್ಚತ್ತಂ ॥೪೩॥

ಅಂತೊಡನೆಟ್ಟಿತ್ತು ಭೋಂಕನೆ ಮಿಡುಮಿಡುಕನೆ ಕಂತು ತಳವೆಳಗಾಗಿ ತಲ್ಲಣಿಸಿ ತನುವೆಲ್ಲಮಂ ಪರ್ವಪಂತಿರೆರ್ದೆ ಪವ್ವನೆ ಪಾಱಿ ತೆಗೆಯಲುಂ ಪಡೆಯದೆ ಮೆಯ್ಮೆಯ್ಯೊಸೋಱಸೆ ಬೆರಸಿ ಕುಳ್ಳಿರ್ದುವುರುಳ್ ಮುಸಗಿದಂತೆ,

ಓರೋರ್ವರ ಕೊರಲಿಂ ಮಣಿ ।
ಹಾರಮುಮಂ ತೆಗೆದು ಮುಗುಳ ಮಾಲೆಯುಮಂ ಚೇ ॥
ತೋರಾಗರಸದೆ ಮೆಯ್ಮಱಿ ।
ದೋರೊರ್ವರ ಕೊರಲೊಳಿಕ್ಕಿದರ್ ಸಂಭ್ರಮದಿಂ ॥ ೪೪॥

ಪದೆದಾಲಿಂಗಿಸುವಂತೆ ಮೋಹರಸದಿಂಪಂ ಸೂಸುವಂತೊಂದನೊಂ ।
ದಿದಿರ್ಗೊಳ್ವಂತೆ ಕಡಂಗಿ ತಮ್ಮೊಳೆನಸುಂ ಗಂಟಿಕ್ಕುವಂತಾಗಲು ॥
ಣ್ಮಿದಲಜ್ಜಾಂಬುವನೀಂಟುವಂತೆ ಹೃದಯಂ ಕೋಟಿಪ್ಪೋಯ್ತು
ಕೈಕೊಳ್ವುದೆಂ।
ದೊದವಿಂ ಕೈಗೂಡುವಂತೆ ಕಣ್ಗಳೊಲವಿಂ ಮೇಲ್ವಾಯ್ದುವೋರೋರ್ವ
ರ್ಹೊಳ್ ॥

ಆಗಳಗ್ಗಲಿಸಿದ ವಿಸ್ಮಯರಸ ತರಂಗದೊಳಂತರಂಗಂ ಮುಱುಗಿ ಪೊದೆಪಡೆಯದಂತೆ ಕಾಯಂ ಕಂಪಮಾಗೆ, ಸೋಂಕಿನ ಸುಖದಿಂ ಸೊರ್ಕಿದಂತೆ ತುಯಂಬುಗಣ್ಪಾಯೆ, ಕಾಮುಜ್ವರಂ ಬಿಡುವಂತೆ ಬಿಂದುವಿಡೆ, ಪರಸ್ಪರ ಸ್ಪರ್ಶನಲೋಲುಪ್ತಿಯಿಂ ಮನಮೆ ತನುವಾದುದನಱಿಪುವಂತೆ ನಯನಾಯುಸ್ಕಾಂತಸಂದರ್ಶನದಿಂ ಮುನ್ನಮೊಳಗೆ ಸಿಲ್ಕಿದ ನನೆಯ ಪುಣಂಬುಗಳ್ ತಪ್ಪು ತೆಱಿದು ಪೊಱಮಡುವಂತೆ ಮೆಯ್ನವಿರ್ಮೊಗಸೆ, ಕನಸಿನ ಸೋಲವುಂ ಕೊನರಿಸುವ ಕಣ್ಸೋಲವುಂ, ಎಮೆಯಿಕ್ಕಲ್ ಮಱೆಯಿಸುವಂತೋರೊರ್ವರನೊಡಲೊಳಡಸಿಕೊಳಲ್ ಕಡಂಗಿಸುವ ಕಡ್ಡವಣೆಯುಂ, ಮನಮನಸುವಿಸಲಾಱಿರದಂತೆಯುಸಿರ್ ಮಿಟ್ಟಿಗೊಳಿಸುವ ಸವಿಯುಂ, ಮೇಲ್ವಾಯಲ್ ಮಲಗಿಸುವಸವಸಮುಮೆನುತ್ತೆ ಸೋಲ್ತುಂ ತಣಿಯದೆ ತಲ್ಲಳಿಸಿ ತಳ್ಳಂಕು ಗುಟ್ಟುವಳುರ್ಕೆಯುಮಿರ್ದ ರೂಪನಿರ್ದಂತಿರೆದೆರ್ದೆಯಂ ಕುದಿಯಿಸಲ್ ಕಡಂಗುವಕಡುಪಂ ಸುಂಗಿ ನೀಗುರ್ಡಿಯಿಸಲ್ ಪಡೆವ ಬಸನದ ಪಸಿವ್ರಂ,

ಬಿಗಿದು ಪುಗಲನುವಿಸುವಲವಲವಿಕೆಯುಂ, ಕೂಡಿ ಕರಗಿಸಲ್ ಕಾಯೆುದ ಕಾಯ್ಪುಂ ಬೆರಸಿ ಬೆಚ್ಚಂತಿರಲ್ ಬಯಸುವ ಬಗೆಯುಂ, ಪತ್ತಿಪಣಿ ದಣಿಯಿಸುವಳಿಪುಂ ಅಳವಿಗಳಿಯೆ; ಸರ್ವಾಂಗದೊಳಂ ಸುಸಿಲ ಸವಿಯಂ ತವಿಸದ ತನಕಮನನುಭವಿಸಿ ನಸುಸೋಂಕಿನೊಳ್ ಮೆಯ್ಮೆಯ್ಯೊಳ್ ಪತ್ತಿ ದಂತೆ ಮನಂ ಮನದೊಳ್ ಸಿಲ್ಕಿದಂತೆ ಕಣ್ ಕಣ್ಣೊಳ್ ತೊಡರ್ದಂತೆ ಮದನ ಮಂತ್ರವಾದಿ ಗಾತ್ರಸ್ತಂಭಂಗೆಯ್ದಂತಿರೆ ಮಿಡುಕದೆ ಮನಮಂ ಸೂಱೆ ಗೊಂಡುದರ್ಕೆ ಕಣ್ಗಾಳಿಗಮಂ ಕಾದುವಂತೆಯುಮಿರ್ಬರುಮೋರೊರ್ವ ರಿಂಪನೆ ಸವಿನೋಟ್ಪಂತೆಯುಂ ಸ್ವಪ್ನಾನುಭೂತರೂಪಾತಿಶಯದಿಂದಮತ್ಯ ತಿಶಯಮಾದ ರೂಪಾಕೃತಿಕೌತುಕಪ್ರತಿಪತ್ತಿಯುಮಂ ಪ್ರೀತಿಯುಮಂ ಪೊಸಪೊಸತು ಮಾಡೆ ತಮ್ಮ ಮ್ಮತಿರ್ಬರಂಗಲತೆಗಳೊಳ್ ತೊಡರ್ದ ಬಗೆಯಂ ತೆಗೆಯಲಾಱದೆ ನೀಡುಂ ಭಾವಿಸಿ ನೋಡುವಾಗಳ್—

ಕುಸುಮಾಸ್ತ್ರೋದಯದಿಂ ಬೆಳರ್ತನಿಯನಂಗಚ್ಛಾಯೆ ತಳ್ತಿಂತೆಮೆ ।
ಯ್ಬಿಸುಪಿಂ ಬೆಂದು ಕರಂಗಿದಂತಿರೆರ್ದೆಯಂ ನಟ್ಟುರ್ಚೆರಕ್ತಾಂಬುವಂ ॥
ಬಸಿವಂತುಚ್ಛಸಮಾದ ಕಣ್ಬೊಣರ ಬೆಳ್ಪುಂಕರ್ಪುವೊಳ್ಗೆಂಪುಮೇಂ ।
ಪೊಸತಾಗಿರ್ದುವೊನೋಟ್ಪಿ ಕಾಯ್ಪುಡುಗದಿರ್ದಂಭೋಜ
ಪತ್ರಾಕ್ಷಿಯಾ ॥೪೫॥

ಅಂತುಮಲ್ಲದೆ,

ಅಲವರಿಸಿ ನೋಡಿದಳ್ ಕೋ ।
ಮಲೆ ಕಣ್ಣೊಳ್ ಮೂಱು ವರ್ಣಮೆಸೆದಿರೆ ಕರ್ನೆ ॥
ಯ್ದಿಲ ಕಿಸುನೆಯ್ದಿಲ ಬೆಳ್ನೆ ।
ಯ್ದಿಲ ಪೂವಿಂ ಮೋದುವಂತೆ ಚಂದ್ರೋದಯಮಂ ।೪೬॥

ಪೊಸಮುತ್ತಂ ತೊಟ್ಟವೋಲ್ ಪೊಣ್ಮುವ ಬೆಮರ್ವನಿಯಿಂ ತಳ್ತಿ
ರೋಮಾಂಚದುರ್ವಿಂ ।
ದಸಮಸ್ನೇಹಾಕುಳಾಲೋಕದಿನಲಸಲಸದ್ಗಂಧಸಿಶ್ವಾಸದಿಂ ಕಂ ॥
ಪಿಸುತುಂ ಕಣ್ಗೊಪ್ಪಿದಳ್ ಕುಟ್ಮಳದಳಕಳಿಕಾ ಪುಷ್ಪಚಾರಂ ಕರಂ ಶೋ ।
ಭಿಸುವನ್ನಂ ತೆಂಬೆಲರ್ ತೂಗುವ ಪೊಸಲತೆವೋಲ್ ಕಾಂತೆ ಕಣ್ಸೋಲ
ದಿಂದಂ ॥೪೭॥

ಮಿಗೆ ಜಾಣಿಂ ಪದ್ಮಜಂ ಮಾಡಿಯುಮತನುವೆ ಕೈವೀಸಿದಂ
ಮತ್ತೆನಲ್ಕಾಂ ।
ತೆಗೆ ಸೋಲಂ ಶೋಭೆಯುಂ ನೂರ್ಮಡಿಸಿದುದುದಿತಸ್ವೇದ
ಸೋತ್ಕರ್ಷಲಾವ ॥
ಣ್ಯ ಗುಣಂ ಬೇಱಿತೊಂದು ಚೆಲ್ವಂ ತನು ಸಪುಳಕೋದ್ಭೇದಿ
ಬೇಱಿತೊಂದು ಚೆಲ್ವಂ ।
ನಗೆಗಣ್ ಬೇಱಿತೊಂದು ಚೆಲ್ವಂ ಪ್ರಹಸಿತವದನಂ ಬೇಱಿತೆ
ಬೇಱಿತೊಂದು ಚೆಲ್ವಂ ॥೪೮॥

ಆಗಳಗುಳದೆ ನಿದಾನಂಗಂಡಂತೆಯುಂ, ಓದದೆ ಚದುರಾದಂತೆಯುಂ, ದಾವಾಗ್ನಿಯೊಳ್ ಬೇವಂಗಕಾಲವರ್ಷಮಾದಂತೆಯುಂ, ವಿಷಮ ವಿಷ ವಿಷೋದಿತಂಗಾಕಸ್ಮಿಕಸುಧಾಸೇಕಂ . ಸಮನಿಸಿದಂತೆಯುಂ, ಆನಂದ ಕಂದಳಿತ ಹೃದಯನುಂ ವಿಸ್ಮಯ ವಿಸ್ಮೃತ ಶರೀರನುಮಾಗಿ

ಬೀಸುವವೊಲ್ ಬೆಳ್ದೆಯ್ದಿಲ ।
ಬಾಸಿಗದಿಂ ಮಳಯಜಾಂಬುವಂ ಸೂಸುವವೋಲ್ ॥
ಬೇಸತ್ತಿನಿಯಳನರಸಂ ।
ಬಾಸಣಿಸಿದನಲಸ ಲಸಿತಲೋಚನ ರುಚಿಯಿಂ ॥೪೯॥

ಅಂತಿರ್ಬರುಮೋರೊರ್ವರಂ ಒಱಲ್ದು ನೋಡುತ್ತುಮಿರ್ದು
ಕನಸಿನೊಳೆಕಂಡ ರೂಪಂ ।
ಮನದೊಳ್ ಮಗುಳ್ದಾದಮಱಸುವಂತಿರೆಯುಂ ಭೋಂ ॥
ಕನೆ ಮೂರ್ಛೆವೋದರೇಕೆಯೋ ।
ಮನಸಂದೊಂದಿದರ ಸುಖಮನಜನೆಡೆಗಡಿವಂ ॥೫೦॥

ಪೂವಿಂ ಪೊಯೆ ಹಮ್ಮೈಸುವು ।
ದಾವುದೊ ಸುಕುಮಾರ ವೃತ್ತಿ ಪೆಣ್ಣಿಂದಾ ಲೀ ॥
ಲಾವತಿ ನಲ್ಲಂ ನಯನೇಂ ।
ದೀವರದಿಂ ಮೋದೆ ಸೇದೆವಟ್ಟಂತಿರ್ದಳ್ ॥೫೧॥

ಅದಲ್ಲದೆ,

ಬಳ್ವಳಸಲ್ಲದೀಯಲೆಯುತಿರ್ದುದು ತೆಂಕಣಗಾಳಿ ಕಾಮಸೀ ।
ಕೊಲ್ವನೆಚಂದ್ರನೀಕೊಱೆದುತಿಂಬನೆ ನಿನ್ನೊಡಗೂಡುವೇೞ್ದ ನೀ ॥
ನೊಲ್ವುದು ಮೊಗ್ಗೆ ಕಾಡುವುದು ಕಾವುದನಾಥೆಯನೆನ್ನನೆಂದವಳ್ ।
ಕಾಲ್ವಿಡಿವಂತೆ ಮುಂದೊಱಗಿದಳ್ ಸುಖದಿಂ ಕವಿತಾವಿಳಾಸನಾ ॥೫೨॥

ಕನಸಿನೊಳೆ ಸುೞಿಪಳಂ ನಾಂ ।
ಸೆನಸಿಂದಂ ನಂಬೆನೆಂದು ಸೆಱೆಯಿರಿಸಲ್ ಲೋ ॥
ಚನದಿಂದೆ ಕಟ್ಟಿತುಂಗ ।
ಸ್ತನಿಯಂ ಬರೆ ತೆಗೆಯಲಾಱದಂತೆ ಬಱಿಲ್ದಂ ॥೫೩॥

ಎನ್ನದಿದಾದೊಡೆ ನೆಱೆಯಲ್ ।
ನಿನ್ನೊಳ್ ಕರಗುಗುವೆ ಎನುತುಮುಂದೊರ್ವರ್ಗಂ ॥
ನನ್ನಿ ನಿನತೆಂದು ಜೀವನ ।
ಮನ್ನುಡಿದಂತಿರ್ವರೊಡನೆ ಮೂರ್ಛೆಗೆ ಸಂದರ್ ॥೫೪॥

ನೆರೆವೊಡೆ ಲಜ್ಜೆಯು ನಡ್ಡಂ ।
ಬರಿಸುವುದೆಮಗಿಂತಿದೆಂದು ಚೈತನ್ಯಮನ ॥
ತ್ತಿರಿಸಿ ಬೆರಸುವವೊಲೋರೊ ।
ರ್ವರ ಮೇಲೆ ಮಲಂಗಿ ಮೆಲ್ಲನೊಱಗಿದರಾಗಳ್ ॥೫೫॥

ತಡೆದಿರದಿಂದೀ ಜೊನ್ನಂ ।
ಕಡುವಿಸಿಲವೊಲಪ್ಪುದೆವಗೆ ನಿಜವಿರಹದೊಳೆಂ ॥
ದೆಡೆಯುಡುಗದೆ ತೋಱುವವೋಲ್ ।
ಬಿಡುತಂದುವು ಬೆಮರ್ಗಳವರ ಮೆಯ್ಗಳಿನಾಗಳ್ ॥೫೬॥

ನಡನಡ ನಡುಗುವಿನಂ ತನು ।
ಮಿಡುಮಿಡು ಮಿಡುಕುವಿನ ಮೆರ್ದೆಯುಮಿಂತು ಮನೋಜಂ ॥
ಕೆಡೆಯಿಸುವನೆಂದು ತೋರ್ಪವೊ ।
ಲೊಡನುಡುಗಿದುವಂಗವಗಿದುವೆರ್ದೆಮುಗುಳವರ ॥೫೭॥

ಅರವೆ ಮುಗಿದಿರ್ದುವೋರೊ ।
ವ್ವರ ನೆರ್ದೆಯೊಳೆಪುಗಿಸಿ ಮುಚ್ಚಿದಂತಲರ್ಗಣ್ಗಳ್ ॥
ಕರವೆ ಬೆಮರ್ತುವು ಬೆರಸಲ್ ।
ಕರಗುವವೋಲ್ ಕೋಮಲಾಂಗ ಲತಿಕೆಗಳವರಾ ।।೫೮।।

ತಱಿಸ್ತೀನೆಸೆದರೊ ನುಣ್ಗೊಡೆ ।
ಯೊಳ್ಗೊಡೆ ನೆಲ್ಲೆರ್ದೆಯೊಳೆರ್ದೆ ತೊಡಂಕಿರೆ ಸಳಿತೋ ॥
ಳ್ತೋೞೊಳ್ ಸಗೆವೊಗದೊಳ್ ವೊಗ ।
ಮೇಲ್ಟಿಂದಿರೆ ಮೋಹದಿಂದವರಾಸ್ತ್ರೀಪುರುಷರ್ ।।೫೯।।

ಕುರುಳಿಂ ಕೋದವರೆರ್ದೆಗಳ ।
ನರಿವಂತಿರೆ ನಿಟ್ಟನಿಡಿಯ ನನೆವಿಲ್ವಿಡಿದಿ ॥
ವ್ವರುಮನಿರದೊಂದೆ ಸರಲಿಂ ।
ದುರುಳೆಚ್ಚನೊ ಮದನನಿನಿಸು ಮೋಹದಿನಾಗಳ್ ।।೬೦।।

ಮಱಿದೊಱಿಗಿದ ನಲ್ಲರಬಾ ।
ಯ್ದೆಱೆಯಿಂ ಪೊಱಮಡುವ ಪುಗುವ ನಱುಸುಯ್ಯೆಂದಂ ॥
ಕಱೆಯುತ್ತೊರ್ಬರ ಮೆಯ್ವೆ ।
ಯ್ಯೊಱೆಯಿಂ ಪೊಱಮಡುವ ಪುಗುವಹರಣಮನಿಱಿಕುಂ ।।೬೧।।

ಕಾಮಿನಿಯ ಶಿಥಿಲಕಚಕಬ ।
ರೀಮೇಘದಿನುದಿರ್ದ ತೋರಮಲ್ಲಿಗೆ ಮುಗುಳ್ಗಳ್ ॥
ಕಾಮುಪ್ರಳಯಂ ಕವಿತರೆ ।
ಪೂಮಱೆಸುರಿವಂತೆ ಸುರಿದುವಂಗದೊಳವರಾ ।।೬೨।।

ಆರಸಸ ಕೊರಲೊಳ್ ತೊಡರ್ದಂ ।
ಬುರುಹಾಕ್ಷಿಯ ಕೇಶಪಾಶವೇಂ ಪೋಲ್ತುದೊಚೆ ॥
ಚ್ಚರಮಂತು ಮುಚ್ಚೆ ವೋಪಂ ।
ತಿರೆಕಡುಪಿಂ ಕೊಂಡಕಾಮುಕಾಳೋರಗಸಂ ।।೬೩।।

ಸ್ಮರನಿಟ್ಟ ಸಿಜಗೆಯಂತಿರೆ ।
ಸಿರಿಮುಂಚಂ ಸ್ಮರಮಹಾಗ್ನಿಯಿಂ ಜೀವರನಾ ॥
ಸ್ಮರವೋಹ ಪ್ರ್ರತರನಿರಿದಂ ।
ಕಗದಂಡದಿನಿರಿದು ಸುಡುವವೊಲ್ ಸಿಪೊಲೆಯಂ ॥೬೪॥

ಅರಸನುರದಲ್ಲಿ ನಾಂಟದ ।
ತರುಣಿಯ ಮುಲಯಜದ ಕುಂಕುಮಾಂಕಿತಕುಚಮೋಂ ॥
ಪರಿಭವಿಸಿತೊ ಕೆಡೆವಿನಸಿರಿ ।
ದುರಕ್ತದೊಳ್ ತೊಯ್ದುಮದನಸರದಿನಿಯುಕೊಂಬಂ ॥೬೫॥

ಅನ್ನೆಗಮಿತ್ತಲವಲೋಕಿತತ್ರಿಲೋಕಪತಿಪೂಜೆಯುರುಂ ನೀರಾಜಿತಜಿನಪತಿ ಚರಣೆಯುರುಂ ಜಿನಸ್ನಾನಸುರಭಿಸಲಿಲಸಿಕ್ತಕುಂತಳತಿಲಕೆಯರುಂ ವಿಶುದ್ಧ ಸಿದ್ಧಶೇಷಾಕ್ಷತಕುಸುಮಸಂಕಾಶಿತಕೇಶಕಳಾಪೆಯುರುಮಾಗಿ ಮುಗುಳ್ದು ಬಂದಾವಿದ್ಯಾಧರಿಯುರಾ ವಿದ್ಯೆಯಿಂ ವಿಮುಗ್ಧನಾಗಿರ್ದ ಕುಮಾರನ ನಡರ್ದೆಳಲತೆಯುಂ ಬಿಡಿಸಿ ಬಾಳಚೂತಮುಂ ತರಿಸುವಂತಿರಾತರುಣಿಯ ತೊಡರ್ದಂಗಲತೆಯುಂ ಬಿಡಿಸಿ ತರಿಸಿ ತುರಿಪದಿಂ ಪೋಗಿ ಪೂಗೊಯ್ವಂತೆ ಅರಸ ನುಮುಂ ಖೇಚರಿಯುರುಮುನಾಚಕ್ರೇಶ್ವರಿಯ ನಿಳಯುದೊಳ್ ಕಾಣದೆ ಮುಗುಳೆಕೊಳನ ತಡಿಗೆವಂದಾಕುಳನಾಗಿ ದಿಗವಳೋಕನಂಗೆಯ್ಯುತಿರ್ದ ಮುಕರಂದನ ಮುಂದಣ ಚಂದ್ರಕಾಂತದ ಶಿಲಾತಲದೊಳೀಡಾಡಿ ನಿಜನಿವಾ ಸಕ್ಕೆ ಪೋದರ್ ಅನ್ನೆಗಮಿತ್ತಲ್

ಎಲರಿಂದೆಚ್ಚೆತ್ತು ಲೀಲಾವತಿ ನಿಜಪತಿಯುಂ ಮುಂಚದೊಳ್ ಕಾಣದಾಗಳ್ ।
ಚಲೆಯಾದಳ್ ಮೂರ್ಛೆವೋದಳ್ ಮುಱಿದಳೊಱಗಿಡಳ್ ಕಂದಿದಳ್ ಕೋ ॥
ಟಲೆಗೊಂಡಳ್ ಸಾವುಗೊಂಡಳ್ ಕಳವಳಿಸಿದಳಾಸತ್ತಳಿಟ್ಟಳ್ ಬೆಮರ್ತಳ್ ।
ನೆಲೆಯಿಂದಂ ಬಿರ್ದಳಿರ್ದಳ್ ವಿರಹದುರಿಯ ಸಂತಾಪದಿಂ
ಕಾಂತೆಯಾಗಳ್ ॥೬೬॥

ಅಚ್ಚನೆ ಬರ್ಪಲರ್ ಕುರುಳ ಕುಂಕುಮಧೂಳಿಯುಸೆತ್ತಿ ಸುತ್ತಲುಂ ।
ಕೆಚ್ಚನೆಯಾದ ಕೌಮುದಿಯುದೇನೆಸೆದಿರ್ದುದೊ ಬಾಲೆ ಬೇಸಱಿಂ ॥
ಬೆಚ್ಚನೆಸುಯ್ದು ಬೆಂಕಿಯೊಳೆ ಬೆಂದಪುದೆಂಬಿನಮಾಗಳಾಕೆಗಾ ।
ದಚ್ಚಿಗಮಂತೆನಲ್ ತಸುವನುರ್ಬಿಸದಿರ್ಕುಮೆ ಕಂತುಗಾದೊಡಂ ॥೬೭॥

ಬಿಸಿಲೆಂಬಂತಚ್ಚ ಬೆಳ್ದಿಂಗಳೆ ತರುಣಿಯ ಮೆಯ್ವೆಂಕೆಯಿಂ ಕಾಯೆಪತ್ತುಂ ।
ದೆಸೆಯೆಲ್ಲಂ ಪೊತ್ತಿದತ್ತಿಂಗಡಲಿಱಿದು ಧರಿತ್ರೀತಳಂ ಕಾಯ್ದುದಾಗಳ್ ॥
ಬೆಸನಕ್ಕೇಱ್ತಿರ್ಪ ತನ್ನಂಗಿಯುರಡಿದಳಿರ್ಗಳ್ ಬೇಯೆ ಬಾಯ್ವತ್ತೆಮೆಯ್‌ತಾ ।
ಪಿಸೆ ಪೊಕ್ಕರ್ ಪಂದರಂ ಪಂದಳಿರೊಳೊಱಗಿದರ್ ಮೇಲುದಂ
ಬೀಸಿಕೊಂಡರ್ ॥೬೮॥

ಕುದಿದುಕ್ಕುವ ಕಣ್ಣೀರೆಸ ।
ರೊದವಿಂ ಸೈಗರೆದು ಬಿಡುವ ಬೆಮರಿನರುಕ್ತಂ ॥
ಪದೆದಾ ಪಂಕಜಮುಖಿ ಕೂ ।
ಱ್ಕಿದಿಗೊಳ್ವಂತಿರ್ದಳತನು ತಾಪಾಸಳನಿಂ ॥೬೯॥

ಕಾಂತಸರೋರುಹ ವದನ ಲ ।
ತಾಂತಶರಂ ಮುನ್ನಮೆಚ್ಚುದೆಯ್ದುದವೊಲ್ ಪೆ ॥
ರ್ಚಿಂ ತೆಗೆನೆಱಿದಿಸುತಿರಲೆರ್ದೆ ।
ಯುಂ ತಪ್ಪಿಸುಪಂತೆ ಕವಿದು ಕಡೆದೆಸೆದಿರ್ದಳ್ ॥೭೦॥

ಅಂತಾ ಬಾಲೆ ನೀರಿಂ ಪೊಱಗಿಕ್ಕಿದ ಬಾಳೆಯಂತೆ ಮಮ್ಮಲಮಱುಗಿ, ಪೂವೆಯೊಳ್ ಪೊಕ್ಕಪಾವಿನಂತೆ, ಬೆದಬೆದ ಬೆಂದಟ್ಟುಪಟ್ಟ ಪುಲ್ಲೆಯಂತಿರೆರ್ದೆ ಪಡಪಡ ಪಾಯೆ ಬೇಸಗೆಯ ಬಿಸಿಲ್ ಪತ್ತೆ ಬಸವಱಿದೆಳವಕ್ಕಿಯಂತೆ ಗಂಟಲ್ ಮಿಡುಮಿಡು ಮಿಡುಕೆ; ಸೂರ್ಮಡಿ ಸುಡುವವಿರಹಪರಿತಾಪಕ್ಕೆ ಕಣ್ಗಳೆಡೆ ನಾಳ್ಕಡಿವೋದಂತೆಯುಂ, ಪ್ರಾಣಂಗಳ್ ಪಳ್ಳಿವೋವಂತೆಯುಂ, ಜೀವಂ ಜೀವಿತೇಶ್ವರನನಱಸಲ್ ಪೋದಂತೆಯುಂ ಇಚ್ಛೆಯಱಿದು ಮುಚ್ಛೆವೋಗಿರ್ಪುದುಂ—ಕಳಾವತಿ ಮೊದಲಾದ ಕೆಳದಿಯರ್ ದೇವತಾ ಪ್ರಭಾವ

ನೀತ ಪ್ರಿಯಸನಾಗಪ ಸುಖದಿಂದಿರ್ದ ಸಖಿಯಂ ನೋಡಲುತ್ಸುಕೆಯು ರಾಗಿ ರಾಗದಿಂ ಬರುತ್ತುಂ ಮುಂದಿರ್ದಳಂ ಕಂಡು ಸತ್ತಳೆಂದೇ ಬಗೆದು ಸುತ್ತಿಮುತ್ತಿ ಕಣ್ಬನಿಗಳಿಂ ಮುಂದುಗಾಣದೆ,

ಈಕೆಯ ಪುಣ್ಯಮೇಕೆ ಕಡೆಗಂಡುದೊ ಕರ್ಮಪೆ ! ಎಮ್ಮ ಚಿತ್ತದೊಳ್ ।
ಶೋಕದ ಕಿಚ್ಚನೇಕೆಯೊ ತಗುಳ್ಚಿದೆಯುಬ್ಬಿದೊಕ್ಕು ದೇವಿಯಿಂ ॥
ತೇಕೆಯೊ ಮಾಡಿದಳ್ ಕರುಣದಿಂ ಕುಲದೇವಿಯರೇಕೆ ಕಾದರಿ ।
ಲ್ಲೀಕುಳರತ್ನಮಂ ಯುವತಿರತ್ನಮನೀ ಭುವನೈಕರತ್ನಮಂ ॥೭೧॥

ಅಲರ್ಗಣ್ಣಿಂಪೂವಿಸಂಬಂ ಸಮೆದನೊ ಮದನಂ ಕೊಂಡು ಮೇಣ್
ಪ್ರಾಣಮಂ ಕೋ ।
ಗಿಲೆಯೆಲ್ಲಂ ಕೊಂದು ಕೈಕೊಂಡುವೊ ಕಳರವಮಂ, ವಕ್ತ್ರಚಂದ್ರಾಂ
ಶುವಂ ಹಂ ॥
ಗೊಲೆಯಿಂದಂ ಚಂದ್ರಮಂ ಕೊಂಡನೊ ಜಳನುಟಿದಂತೇಕೆಪೇಟ್
ನೋಡಳೇಕಿಂ ।
ತೆಲೆಗೇ ಮಾತಾಡಳೇಕೆಮ್ಮಯ ಸಖಿಮುಖದಿಂ ಹಾಸಮಂ
ಸೂಸಳೆಮ್ಮೊಳ್ ॥೭೨॥

ಎಂದು ನೊಂದು ಶೋಕಂಗೆಯ್ದುರಮಂ ಮೋದಿಕೊಳ್ವ ಕೆಳದಿಯರಂ ಕಳಾವತಿಯಿಂತೆಂದಳ್‌ಃ—

ಈದಯಿತೆ ಕಣ್ಣ ಮೊದಲಿಂ ।
ಪೋದುದು ಸಾಲದುದೆ ನೊಂದ ನಿಮ್ಮೆರ್ದೆಯಿಂದಂ ॥
ಪೋದಪಳುರಮಂ ಕರದಿಂ ।
ಮೋದದಿರಿಂ ನೋಳ್ಪುದಿನ್ನುಮುಸಿರಂ ಸಖಿಯಾ ॥೭೩॥

ಎಂಬುದುಮೆಲ್ಲರುಂ ನೀಡುಂ ನೋಡಿ—ಜೀವಮಿನ್ನುಮುಂಟು, ಮನ್ಯುವಿಕ್ಕೇಕೆ ಶೋಕಿಸುವಿರೆಂಬಂತೆ ಮಿಡಿದು ಪಾಯ್ವುವೆಲ್ಲೆರ್ದೆಯುಂ ಕಂಡು ಅಟಿಲನಳವಡಿಸಿ ಹೃದಯಮುಮಂ ಪದುಳಂಗೆಯ್ದು ನೆಲದೊಳಿರ್ದಳನೆತ್ತಿ

ಪಾಸಿನೊಳ್ ಪಟ್ಟಿರಿಸಿ ತುಱುಪದಿಂ ತಣ್ಗೊಳಸದಾಲಿಸೀರುವುಂ ಅಲರ ಬಿಜ್ಜಣಿಗೆಯುವುಂ ಕೊಂಡು ಕಣ್ಬನಿಗಳ್ ಕೂಡುಗುವೆಂದು ಬಿಸುಸುಯ್ ಬೆರಸುಗುವೆಂದು ದುಕ್ಕದಿನಾನನವುನೋಸರಿಸಿ ಮೇಲೆ ಸೂಸುತ್ತು ಮೊಲೆದು ಬೀಸುತ್ತುಂ ತಮ್ಮೊಳಿಂತೆಂದರ್ಃ—

ಸುರತಶ್ರಮುಕೆಂದಿರಿಸಿದ ।
ಕರಗದ ತಣ್ಣೀರುವುಲರ ಬಿಜ್ಜಣಿಗೆಯುವಿೀ ॥
ತರುಣಿಯು ಮೋಹನಹತಿಪರಿ ।
ಕರವಾದುದು ಬಿದಿಯು ಬಗೆಯುನಾವನೊ ಏಗುವಂ ॥೭೪॥

ಎಂದು,

ಎಲೆ ಮುಗ್ಧೆ ನಿನ್ನ ನೋಟಂ ।
ತೊಲಗಿದ ಕತದಿಂದೆ ಕರ್ಣಪೂರದ ಪೊಸನೆ ॥
ಯಿದ್ದಲನಿಂದು ಕಂಡೆವಲ್ಲದೊ ।
ಡಲರ್ಗಣ್ಗಳ ಕೆಯ್ಯೊಳಾರುಮೇಂ ಕಂಡಪರೇ ॥೭೫॥

ಲೀಳಾವತಿ ಲೀಳಾವತಿ ।
ಬಾಳೆಯು ಬಂಧು ಪ್ರಿಯೇ ನಿಜಪ್ರಿಯುಸಖಿಯರ್ ॥
ಕೇಳ ಕಳವಳದೊಳಱಿದಪ ।
ರಾಳೋಕಿಸು ತಂಗೆಯೆಂದು ಕರೆದರ್ ಕಿವಿಯೊಳ್ ॥೭೬॥

ಹರಕಲಿಸಿತಂಗಲತೆಯೊಳ್ ।
ಹರಣಂ ಸುಯ್ ನಿವಿುರ್ದು ನಡೆದುದಱಿಯುವೆ ಕಿಱಿದೋ ॥
ಸರಿಸಿದುದು ಪುರ್ವು ಕಿಱಿದೊ ।
ತ್ತರಿಸಿದುದೆಮೆದುಱಿುಗಲಲರ್ದುವವಳಲರ್ಗಣ್ಗಳ್ ॥೭೭॥

ಅಂತು ಕಣ್ಗಳಂ ತೆಱೆದು ಕೆಳದಿಯರ ಮೊಗವುನಡರೆ ನೋಡುವುದು ಮಾಕೆಯಾ ಕಳಾವತಿಕಣ್ಗಳಂ ತೊಡೆದು ತಲೆಯುಂ ಮೇಲೆ ತೆಗೆದು ತೊಡೆಯು

ಮೇಲಿರಿಸಿಕೊಂಡು ನಿರಂ ಕುಡಿತೆ ಕುಡಿತೆಯಿಂ ಕುಡಿಯಿಸಿ ಕುದಿವೆರ್ದೆಯೊಳ್
ಪುಲಯುಜಮನೊತ್ತಿ ತಳಿರ ಬಿಜ್ಜಣಿಗೆಯಿಂ ಬೀಸಿ ಬಟಿಲ್ಕೆಯುಂ ಕಳೆದು
ಮೆಯ್ಯಟಿಯಿಂ ತದ್ವೃತ್ತಾಂತಮಂ ಬೆಸಗೊಳ್ಪುದುಮಾಕೆಯಿಂತೆಂದಳ್-

ಇನಿಯುನನಸು ಪಘುಸಂ ಸೂ ।
ತನ ಚಂಪಕದಾಮಲಲಿತವಕ್ಷಃಸ್ಸ್ಥಲನಂ ॥
ಮನಸಂದು ಸೋಂಕಿ ಕುಳ್ಳಿ ।
ರ್ದನನಿಂದಾಂ ಕನಸಿನಲ್ಲಿ ಕಂಡೆಂ ಕೆಳದೀ ॥೭೮॥

ಎಂಬುದುಮಾಕೆಯಾಕೆಯ ಕೊರಲ ಚಂಪಕಮಾಲೆಯುಮಂ ಮುನ್ನ
ವಿಕ್ಕಿದ ಮುತ್ತಿನ ಸರವಿಲ್ಲದುದುಮಂ ಕಂಡು, ಅನುಮಾನಿಸಿ, ಕನಸಲ್ಕೆಂ
ದಱಿದು ಮಂದಸ್ಮಿತವದನೆಯಾಗಿ—

ಬಳೆಯೆ ಮುದಂ ನಿನ್ನ ಸಖೀ ।
ಕಳಾಪಿಗೆಳ್ಗೊಗೆದ ನಿಜಪಯೋಧರದೊಳ್ ತ ॥
ಱಿತ್ತಿಳವಿಂಚಿನಂತೆ ತೊಳಪು ।
ಜ್ಜ್ವಳ ಮೌಕ್ತಿಕದಾಮವೆತ್ತವೋಯ್ತು ಮೃಗಾಕ್ಷೀ ॥೭೯॥

ಎಂಬುದುಮಾಕೆಯುಗಿದು ತಳವೆಳಗಾಗಿ ತುಂಬಿದ ಪೆಱಿಯಿನೊಱಗಿದ
ನೆಯ್ದಿಲಂತೆ ಎಮೆದುಱುಗಲೆಱಗೆ ಕೆಳೆವರಿವ ಕಣ್ಗಳೆಸೆಯೆ ಕುಚಕುಲಶದ
ಚಂಪಕಮಾಲೆಯೊಳ್ ಮಲ್ಲಿಗೆಯ ಮುಗುಳ ಸರಮಂ ಬೆರಸುವಂತೆ ಕಣ್ಣಾ
ನೀರಿಕ್ಕಿ ನೀಡುಂ ಭಾವಿಸಿ ನೋಡಿ,

ಮೊನಸಿದ ಮೆಯ್ಸುವಿರಿಂದಾ ।
ನನಾಬ್ಜವಿಕಸನವಿಶೇಷದಿಂದದು ನಿಜನಾ ॥
ಥನ ಕೊರಲ ಮಾಲೆಯೆಂಬುದ ।
ನನಿಬರ್ಗಂ ಪೇೞ್ದಿಳುಸಿರಲಳವಲ್ಲದವೋಲ್ ॥೮೦॥

ಕೊರಗಿದಪುದೆಂದು ತಳಿವಂ ।
ತಿರೆ ನೆಯ್ದಿಲಿನಮೃತ ರಸಮನಾಸಕಳ ಸುಧಾ ॥
ಕರಮುಖಿ ಪೂಸಿನ ಸರದೊಳ್ ।
ಸುರಿದಳ್ ಬಾಷ್ಪಾಂಬುವಂ ವಿಲೋಲಾಕ್ಷಿಗಳಿಂ ।೮೧॥

ಏವಣ್ಣಿಪೆನಾ ಸಂಪಗೆ ।
ಪೂವಿನಮಾಲೆಯೊಳೆ ಪಾಯ್ದು ಬಿರ್ದಿರ್ದುವು ಮಾ ॥
ಚ್ಛಾರ್ಭವೇಗಮನಾಳ್ದಂತೆವೊ ।
ಲಾವನಿತೆಯ ಮುಗ್ಧನಯನ ಭೃಂಗಯುಗಂಗಳ್ ॥೮೨।

ಅಂತು ನೋಡುವಳಂ ಕಂಡು ಮನಂಗೊಂಡು ಕಳಾವತಿ ಮತ್ತಂ ಪಿಂತೆದಳ್:—ಇದು ಪದ್ಮಾವತಿಯ ವರಮುಂ ನಿಜಪತಿಯ ಬರವುಂ ಬಲ್ಲವರ್ ಬರೆದಂತೆ ತಪ್ಪಿದುದಿಲ್ಲೆಂತಪ್ಪೊಡವಾದುದುಮಲ್ಲದಲ್ಲಿ ಮನಂ ಪಸಲ್ವೇಡ. ನೀನತಿಸ್ನಿಗ್ಧೆಯುಂ ಮುಗ್ಧೆಯುಮಪ್ಪುದರಿಂ ನಿಜಪತಿಸ್ಪರ್ಶದತ್ತ ಮೂರ್ಚ್ಛೆಯಿಂ ಮೆಯ್ಮರೆದು ಕನಸೆಂದೇ ಬಗೆದೆಯಾನಿನ್ನುವೊಂದು ತೆರದಿಂ ತೋರ್ದಪ್ಪೆನೆಂದಾಕೆಯನೆತ್ತಿ ಪಾಸಿನಪಚ್ಚವಡಿಕೆಯಂ ನೋಡಿದಾಗಳ್—

ಕುದಿಯೆ ಬೆಮರ್ತುರ್ಚ ಪಚ್ಚಡದೊಳಚ್ಚೊತ್ತಿದಂತಿರೆ ಪತ್ತಿತೋರ್ಪವೊ ।
ಳ್ಗದಪಿನ ನೀಳ್ದತೋಳೆ ನತಪಾರ್ಶ್ವದ ಪರ್ಬುಗೆವೆತ್ತ ಬೆನ್ನ ಕೊ ॥
ರ್ಬಿದ ಪೊಱವಾಱ ಪೆರ್ದೊಡೆಯ ಜಂಘೆಯ ಪಾದದ ಪಜ್ಜೆಯೆಯ್ದೆ ಮು
ಟ್ಟಿದ ಕೃಶಮಧ್ಯದೊಂದೆಡೆಯಿನೇನೆಸೆದಿರ್ದುದೊ ರಾಜಪುತ್ರನಾ ॥೮೩॥

ಅದಂ ಕಂಡಾಕೆ ಪರಮಪಂಡಿತೆಯಪ್ಪುದಱಂದಾತನುಮತನುತಾಪತಪ್ತನಪ್ಪುದನನುಮಾನದಿಂದಱಿದುಮೆಯ್ವೆಂಕೆಯಿಂದೊಳಗು ಕಂದೆ ಕತ್ತುರಿಯ ಪಳಕಿನಂತೆ ಪುಳಿಚೆರ್ದ ಚಂದನದಣ್ಪುವೆರಸು ಪತ್ತಿದ ಪರಿಮಳಮಂ ಪರಪುವೀ ಚೆಮರ ಪಜ್ಜಳಿಸುವ ಪಜ್ಜೆ ನಿಜಮನಃಪ್ರಿಯನ ಪಜ್ಜೆಯಿದು ನಿನ್ನ ಮೆಯ್ವಜ್ಜೆಯೆ ಮಲ್ಲಿಗೆಯ ಮರುಗದ ಬೆರಕೆವಾಸಿಗಂ

ನಿನ್ನ ನಿಯುನ ತುಱುಂಬಿನ ಬಾಸಿಗವುವ ನಿನ್ನ ಮುಡಿಯು ಪೂಮಾಲೆಗಳೆಂದು ಬೇಱುತಿವೇಱುತಿ ತೋಱು ನಿನ್ನ ಕೊರಲ ಪೂಮಾಲೆಯು ಮೆಂತಕ್ಕೆ ತಡವಾಗಿ ತಡೆಯದೆ ಕೂಡುವುದನಱುಪಿದಪ್ಪುವೆಂದು,

ನಿನ್ನಸು ಕೊರಲ್ಗೆ ವಂದೊಡ ।
ವಿನ್ನೆಗವುಚ್ಚಿಗ ವುದೇನೊ ಕೆಳದಿ ನಿಜೇಶಂ ॥
ನಿನ್ನಯು ಕೊರಲೊಳ್ ಕೋದೀ ।
ಪೊನ್ನಂತಪ್ಪುರಲ ಮಾಲೆ ಕಾದಪುದಲ್ತೇ ॥೮೪॥

ಜಳಸೇಕ್ಕಂ ಪೂಗೆ ಜೊನ್ನಂ ಕೊರಗಿದ ಸಸಿಗಾಂದೋಳನಂ ರೋದಿಸುತ್ತಿ ।
ರ್ಪೆಳಗೂಸಿಂಗಾದ್ರ್ರವಾತಂ ಪಗಲ ಕುಮುದಿಸೀ ಕಾನನಕ್ಕಂದು ವಿಂದುಂ ॥
ಕಳಗೀತಂ ದುಃಖಿತಾತ್ಮಂಗತನುತರುತಲಚ್ಛಾಯೆ ಮಾರ್ಗ ಕ್ರಮವ್ಯಾ ।
ಕುಳಿತಂಗಾಶಾನುಬಂಧಂ ವಿರಹಿಗೆ ಪಿರಿದುಂ ಜೀವನಾಧಾರ ಮಲ್ತೇ ॥೮೫॥

ಎಂಬುದುಂ ಕೆಳದಿಯುರವಳ ಮನಮನಾಱತಿ ನುಡಿದು ಶಯನ ಸದನಕೊಡಗೊಂಡು ಪೋದರ್, ಅನ್ನೆಗವಿತ್ತಲ್—

ಕುಮುದಾ ಮೋದವು ತೀಡೆ ಕೋಡುವೆಲರಿಂ ಮೆಲ್ಪಿಂವಯು ಸ್ಯಂ ವಿಷ ।
ಣ್ಣಮುಖಂ ಮಾಡುವ ತಣ್ಪಿನಿಂ ತೊಲಗೆ ಮೂರ್ಛಾವೇಗ ಮಾಗಳ್ ಮಹೀ ।
ರಮಣಂ ಕಾಣದೆ ಮುಂದೆ ಮುಗ್ಧಮುಖಿಯುಂ ಬೇಸತ್ತುದು ಸ್ವಪ್ನಮೆಂ ।
ದು ಮನಂಗುಂದಿದನಾರ್ಗೆ ಮಾಡದೊ ಮಹಾವ್ಯಾಮೋಹ ಮಜ್ಞಾನಮುಂ ॥೮೬॥

ಅಳುರ್ವ ಸುಧಾಕರಂಗಗಿವ ವೆಯ್ಯುಟಿಲಪ್ಪ ಬಿಸುರ್ಪನಾಳ್ವನೀ ।
ರ್ದಳಿವ ಬಿಗುತ್ತುರ್ಬಾಯುಟಿವ ಸಂತಯಿಪಗ್ಗಳವಾಗೆ ಸುಯ್ಯು(ಸು ॥
ಯ್ಯೊಳ)ಗಸು ಪೋದುದೆಂಬೆರ್ದೆಯ ನಣ್ಪ ವಿಷಾದವಿನೋದದಿಂದೆ ಕ ।
ಣ್ಗೊಳೆ ಬೆಳಗಾದುದಂದು ನೃಪಸೂನುಗವಾಸಚಿವಾಗ್ರ ಸೂನುಗಂ ॥೮೭॥

ಬೆಳಗಪ್ಪುದುಮಾಗಳ್ ತಾಂ ।
ಬೆಳಗಾಗಿಸಿದಂತೆ ತೊಳಗಿ ಬೆಳಗುವ ಮುಕ್ತಾ ॥
ಫಳಹಾರಮುಸರಸನ ಕೊರ ।
ಲೊಳೆಸೆವುದಂ ಚತುರಸಚಿವತನಯುಂ ಕಂಡಂ ॥೮೮॥

ನವಲತೆಯುಂ ಸುಧಾಕರ ಮರೀಚಿಗಳಾಮಣಿಹಾರ ಮಾಲೆಯುಂ ।
ಧವಳಿಸಿ ನೀಳ್ದ ಬೆಳ್ವೆಳಗಿನಿಂ ಬಿರಿಯಲ್ ಸರಸೀರುಹಂಗಳೊ ॥
ಲ್ಲವೆ ಮುಗಿಯಲ್ ಸರೋವರದ ಕೈರವಮೊಲ್ಲದೆ ನೋಡೆ ಕೂಡಲೊ ।
ಲ್ಲವೆ ಪೂರ್ಣವಕ್ಕಿಗಳ್ ಪರೆಯಲೊಲ್ಲವೆ ಬಾಳ ಚಕೋರ
ಮಾಲೆಗಳ್ ॥೮೯॥

ಇನನುದಯಭೀತಿಯಿಂದ ।
ಸ್ತನಗಮನೆಯ್ದಲ್ಕೆ ಪಡೆಯದುಡುಗಣಮುಂ ಚಂ ॥
ದ್ರನು ಮಾಗಿರಿಗವತರಿಸಿದು ।
ದೆನಿಸಿದುವಾ ಹಾರಮುಂ ನೃಪೇಂದ್ರಾನನಮುಂ ॥೯೦।

ಅದಲ್ಲದೆಯುಂ
ನೀಱಿನುರದೊಳ್ ಮನೋಜನ ।

ಪಾಱುಂಬಳೆಯೆನಿಸಿ ಮಲಯರುಹಪರಿಮಳಮಂ ॥
ಬೀಱುವಪುಳಕಾಂಕುರದ ।
ಕ್ಕೀಱಿಂ ನಸುಕಱಿಕಱಿದ ಮೊಲೆವಜ್ಜೆಯುಮಂ ॥೯೧॥

ಅಂತು ಕಂಡು ಮನಂಗೊಂಡು ಸಮುತ್ಸಾಹಿತ ಹೃದಯನುಂ ವಿಶ
ದಾನಂದನುಂ ವಿಗತವಿಷಾದನುಂ ದರಹಾಸವಿಸರ್ಜಿತ ವದನವೈರಸ್ಯನು
ಮಾಗಿ ಮಕರಂದನಿಂತೆಂದಂ:—

॥ ದ್ರುತವಿಲಂಬಿತಂ ॥

ಉಡುಗಣತಿರ್ದಪನಂಶುವನಿಂದುವೀ ।
ಯಳುಡುಗಳಟ್ಟಿದವು ಕಂಡಿದಱಿಂದಮುಂ ॥
ಬಿಡದೆ ನಾಣ್ಚಿದವೋಲ್ ನಿಜಕಂಠದೊಳ್ ।
ತೊಡರ್ದ ಹಾರವಿದೆತ್ತಣದೂರ್ಜಿತಾ ॥೯೨॥

ಸ್ಮರಸುಂಡಿಗೆಯೊತ್ತಿದ ವೋಲ್ ।
ನಿರಂತರಂ ಸ್ಮರಣಭೂತ ಭಕ್ತ್ಯತಿಶಯದಿಂ ॥
ಗುರುಕುಚಲಿಂಗಂ ಪಿರಿದುಂ ।
ಪರಿಣಮಿಸಿದುದೆರ್ದೆಯೊಳೆಂಬುದಂ ಪ್ರಕಟಿಪವೋಲ್ ॥೯೩॥

ಹಾರದ ಗಡಣದೊಳಂ ಕುಚ ।
ಭಾರಂ ಬಳಸಂದು ಬಂದವೋಲ್ ನಿನ್ನ ವಿಶಾ ॥
ಲೋರಸ್ಸ್ಥಳದೊಳ್ ತೊಳಗುವ ।
ನಾರೀ ಕುಚ ಚಂದನಾಂಕ ಮೆತ್ತಣಿನಾಯ್ತೋ ॥೯೪॥

ಎಂಬುದುಮಾನುಡಿಯೆ ಕೆಯ್ವಿಡಿದು ನೆಗಪಿದಂತೆಯುಂ ವಿರಹ ದಹನದಾಹದಿಂ ಸಮಾಕೃಷ್ಟಶಿರೋನಿಚಯನಾದಂತೆಯುಂ ಜೀವಂ ಬೊಯ್ದಂತೆಯುಂ ಮುಂ ಪಟುಪ್ರಾಯ ಪ್ರಾಣನಾಗಿರ್ದ ಮಾನವ ಮದನ ನಾಶಿಲಾತಳದಿಂ ಭೋಂಕನೆರ್ದು ಕುಳ್ಳಿರ್ದು ನಳಿನನಾಳ ಕೋಮಳ ಕೋಮಳಮುಂ ಕಂಠಾಶ್ಲೇಷಕಮನೀಯಪ್ರಾಣಮುಮಪ್ಪುದಱಿಂದಾ ಹಾರಮುಂ ಮನೋಹರಿಯ ಬಾಹುಲತಿಕೆಯುಂ ಬಗೆವಂತೆ ಬಗೆದುಆಕೆಯ ಮನಂಬುಗುವಾಗಲತಿ ಸ್ಥೂಲತೆಯಿಂ ಪುಗಲಱಿಯದೆ ಪೆಱಗುಱಿದ ವಿರಹಪಾಂಡುಪಯೋಧರದಂತೆ ಪೇರುರದೊಳ್ ಪೊಳೆವ ಮಳಯಜ ಧವಳ ಕುಚಕಲಶ ಲಾಂಛನಮುಮಂ ಪುಲಕ ಪ್ರಸ್ವೇದ ಪ್ರಸಾರಿತ ಶರೀರಂ ಹರ್ಷ ವಿಶೇಷ ವಿಕಸಿತ ವಿಲೋಚನಂ ಪ್ರತ್ಯಕ್ಷಾಭಿಜ್ಞಾನದಂತೆ ನಿಡುಂ ಭಾವಿಸಿ ನೋಡಿ

ಮಳಯಜ ಲಿಪ್ತಾಂಗಿಯುಮು ।
ಜ್ಜ್ವಳಹಾರೆಯುಮಿಂದು ಕನಸಿನೊಳ್ ಸಿತಶಯ್ಯಾ ॥
ತಳಗತೆಯಂ ಕಂಡಂತಿರೆ ।
ಪೊಳೆದಪುದೆನ್ನಯ ಮನಕ್ಕೆ ಮತ್ಕಾಮಿನಿಯುಂ ॥೯೫॥

ಎಂದರಸಂಗೆ ಮಕರಂದನೆಂದಂ– ಇಂದುಮಿನ್ನುಂ ಮೂರ್ಛೆದಿಳಿ ಪಲೆಂದು ಸೀವರ್ೂಗಳಂ ಕೊಳಲೀಕೊಳಕ್ಕೆ ಆಂ ಬಂದ ಪೆಱಗೆ ಪೊಱೆಯಾ ಗಿರ್ದ ನಿನ್ನನಾಖೇಚರಿಯುರೆತ್ತಿಕೊಂಡು ಎತ್ತಲಕ್ಕೆ ಪೋದರಲ್ಲಿ ಪಲ್ಲಭೆ ಯೊಳೆರಡಿಲ್ಲದೆ ನೆರೆದುದಸೀಲಚ್ಚಣಮೆ ಪೇೞ್ಗುಮಿಲ್ಲಿ ಸಂದೇಗಮೇವುದು? ಮಕರಂದ ಗಂಧಮುನನುಭವಿಸಿಯುಂ ಕುಸುಮದೊಳ್ ಸಂದೆಗಂಬಡು ವಂತಕ್ಕುಂ ಆಕೆ ನಿನಗೊಲ್ದುದ ನೀವಿಪುಳ ಪುಳಕೋದ್ಭೇದಸ್ಫುಟಿತಮುಪ್ಪ ಕುಚಚಂದನಾಂಕಮುಱೆಪುಗುಂ ಆಕೆ ಪದ್ಮಿನಿಯೆಂಬುದನೀಸಿಜಾಂಗಲಗ್ನ ತತ್ಸುಂದರೀಸುರಭಿಸ್ವೇದಮೆ ಪೇೞ್ಗುಮೆಂದಾಱಿ ನುಡಿದು—

ಕೊಳದೊಳ್ ನಿರ್ವೂಗಳೆಲ್ಲಂ ಸಮೆದುವು ನಳಿನೀನಾಳಮಿನ್ನೊಂದು
ಮಿಲ್ಲೊ ।
ಳ್ದಳಿರುಂ ಮೇಲ್ವೂವನಿನ್ನಾಂ ಪಡೆಯೆಱಿಸಿಯುಂ ಕಾಣೆನಿಂತೀ
ವನಾಂತಂ ॥
ಗಳೊಳಿಂತತ್ಯುತ್ಕಟಂ ನಿನ್ನಯ ವಿರಹಮುಂ ಮಾತೋರ್ವುದಲ್ಲಿಂ ಘನಶ್ಯಾ ।
ಮಳ ಸಾಂದ್ರೋದ್ಯಾನದಿಂದಲ್ಲಿಗೆ ತಡೆದಿರವೇಂ ಪೋಗುವಂ
ರಾಜಪುತ್ರಾ ॥೯೬॥

ಎಂದಲ್ಲಿಂದವೆತ್ತಿ ಮುತ್ತಿನ ಸರಮಂ ತನ್ನ ಕೊರಲೊಳ್ ಕೋದು ಅರಸಂಗೆ ಪೂವಿಸಂಗಿಕೆಯಂ ತುಡಿಸಿ ಬಾಳಮೃಣಾಳಮುಮಂ ಬಾೞೆಯ ತಿಳ್ಳುಳೆಲೆಯುಮುಂ ಸುತ್ತಿ ಮುಂದಲೆಯೊಳ್ ಚಂದನದ ಚಿಗುರಂ ಸೆರ್ಕಿ ತಳಿರೆಕ್ಕವಡಮಂ ಮಡಮೇರಿಸಿ ಕೈಗೊಟ್ಟು ಮಯೂಖ ನಿರ್ಝರಗಿರಿಯಿಂದ ಮಿೞಿಪಿ ವಿರಹವಹ್ನಿಗೆ ನೆರವಾಗಿ ಮಾರ್ತಂಡನುದಯಂಗೆಯ್ದುಳುರದ

ಮುನ್ನಮೆ ಮೆಲ್ಲಮೆಲ್ಲನೆ ನಡೆಯಿಸಿ ಕುಸುಮಪುರದ ಪೊಱವೊಱಲೊಳ್
ಪದ್ಮಾವತೀ ನಿಳಯಮಪ್ಪ ಕುಸುಮಾಕರೋದ್ಯಾನಮಂ ಪುಗಿಸಿ
ತಳಿರೊಳ್ ವಲ್ಲೀಚಯಂ ಚೆಲ್ಲುವ ಕುಸುಮ ರಜೋರಾಜಿ
ಪಿಷ್ಟಾತಕಂ ನೀ ।
ರ್ದಳಿಪಂ ಪುಷ್ಪದ್ರವಂ ಪೂವಲಿ ನಿಪತಿತ ಪುಷ್ಪೋತ್ಕರಂ ಪೂರ್ಣ
ಕುಂಭಂ ॥
ಫಳಜಾಳಂ ದರ್ಪಣಂ ಪೂಗೊನೆ ನಿಡುನನೆ ಸಾಮೋದ ಶೇಷಾಕ್ಷತಂ ಮಂ।
ಗಳಗೀತಂ.ಭೃಂಗನಾದಂ ತನಗೆನೆ ನಡೆದಂ ರೂಪಕಂದರ್ಪದೇವಂ ॥೯೭॥

ಇದು ವಿದಿತ ವಿವಿಧ ಪ್ರಬಂಧವಸ ವಿಹಾರ ಪರಿಣತ ಪರಮಜಿನ
ಚರಣರಮ್ಯ ಹೈಮಾಚಲೋಚ್ಚರಿತಸುಖಮಯೂಖ ಮಂದಾ
ಕಿನೀ ಮಜ್ಜನಾಸಕ್ತ ಸಂತತೋತ್ಸಿಕ್ತ ದಾನಾಮೋದ
ಮುದಿತ ಬುಧಮಧುಕರ ಪ್ರಕರ ಕವಿರಾಜ
ಕುಂಜರವಿರಚಿತಮಪ್ಪ ಲೀಲಾವತಿಯೊಳ್

ನಾಯಿಕಾದರ್ಶನ ವರ್ಣನಂ

ದಶಮಾಶ್ವಾಸಂ

ಸಂಪೂರ್ಣಂ

# ಕೆಲವು ಉತ್ತಮ ಪ್ರಕಟನೆಗಳು



**ನನ್ನ ನಲ್ಲ—** ಮಧುರಚೆನ್ನರ ಕವನಸಂಗ್ರಹ ೦–೧೦–೦

**ಕಾಮನಬಿಲ್ಲು—** ಸಂಪಾದಕರು:– ಅ. ನ. ಕೃಷ್ಣರಾಯರು
೨೪ ಕಥೆಗಳು ವಿವಿಧ ಕತೆಗಾರರಿಂದ ೧–೧೨–೦

**ಯಮನಸೋಲು—** ಶ್ರೀರಂಗರ ಏಕಾಂಕ ನಾಟಕ ೦– ೪–೦

**ಅಭಿನವಪಂಪ—** ವಿವಿಧ ಲೇಖಕರಿಂದ. ಸಾದಾಪ್ರತಿ ೧– ೪–೦
ಕ್ಯಾಲಿಕೋ ೨– ೮–೦

**ಚೆನ್ನಬಸವ ಪುರಾಣ—** ಸಚಿತ್ರ
ವಿರೂಪಾಕ್ಷ ಪಂಡಿತಕೃತ ೬– ೮–೦

( ಅಚ್ಚಿನಲ್ಲಿದೆ )

**ಅಶಾಂತಿಪರ್ವ—** ಆನಂದಕಂದರ ಉತ್ತಮ ಐತಿಹಾಸಿಕ
ಕಾದಂಬರಿ ೧– ೦–೦

**ಕರ್ನಾಟಕ ಸಾಹಿತ್ಯ ಮಂದಿರ,**
**ಧಾರವಾಡ.**